# ಇಸ್ಲಾಮ್:
# ಕಾರುಣ್ಯದ ವ್ಯವಸ್ಥೆ

ಮೌ| ಸೈಯದ್ ಹಾಮಿದ್ ಅಲೀ

ಅನುವಾದಕರು: ಬಿ. ಎಸ್. ಶರ್ಫುದ್ದೀನ್

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

## ಪ್ರಕಾಶಕರ ಮಾತು

ಪಾಶ್ಚಾತ್ಯ ಮಾಧ್ಯಮಗಳ ಅಬ್ಬರದ ಅಪಪ್ರಚಾರದಿಂದಾಗಿ ಇಂದು ಇಸ್ಲಾಮ್ ರ್ಮವನ್ನು ಹಿಂಸೆ, ಭಯೋತ್ಪಾದನೆ ಮತ್ತು ವಿಧ್ವಂಸಕ ಕೃತ್ಯಗಳೊಂದಿಗೆ ತಳಕು ಕುವ ಕ್ರಮ ವ್ಯಾಪಕವಾಗುತ್ತಿದೆ.

ಇಸ್ಲಾಮ್ ಕರುಣೆಯ ಧರ್ಮ. ಅದು ಸೃಷ್ಟಿಕರ್ತನಾದ ಅಲ್ಲಾಹನನ್ನು ಮದಯಾಮಯ ಮತ್ತು ಕರುಣಾನಿಧಿಯೆಂದು ಸಾರುತ್ತದೆ. ಅಂತಿಮ ಪ್ರವಾದಿ ುಹಮ್ಮದ್‌ರನ್ನು(ಸ) ಸಕಲ ಲೋಕಗಳಿಗೆ 'ರಹ್ಮತ್' (ಕರುಣೆ) ಎಂದು ಪವಿತ್ರ ್‌ಆನ್ ಘೋಷಿಸಿದೆ.

ಇಸ್ಲಾಮ್‌ನ ಚಿರಂತನ ಮೌಲ್ಯಗಳಾದ ಶಾಂತಿ, ಸಮಾಧಾನ, ವಿಶ್ವಬಂಧುತ್ವ, ಯೆ ಮತ್ತು ಕರುಣೆಯನ್ನು ಮುಸ್ಲಿಮೇತರ ಬಂಧುಗಳ ಮನಮುಟ್ಟುವಂತೆ ತಿಪಾದಿಸಿದ ಒಂದು ಉಪನ್ಯಾಸದ ಕನ್ನಡಾನುವಾದವಿದು. ಭಾರತದ ಓರ್ವ ಶ್ರೇಷ್ಠ ಡಿತರಾದ ಮೌ| ಸೈಯದ್ ಹಾಮಿದ್ ಅಲೀ ಯವರ ಉರ್ದು ಉಪನ್ಯಾಸವನ್ನು ಬಿ.ಎಸ್.ಶರ್ಫುದ್ದೀನ್ ಅವರು ಸುಂದರವಾಗಿ ಕನ್ನಡಕ್ಕೆ ಭಾಷಾಂತರಿಸಿದ್ದಾರೆ.

ಇಸ್ಲಾಮ್‌ನ ಬಗೆಗಿರುವ ಪ್ರಸ್ತುತ ಅಪಪ್ರಚಾರದ ಪೊಳ್ಳುತನವನ್ನು ಬಹಿರಂಗ ಸಿ ಇಸ್ಲಾಮ್ ಒಂದು ದಯೆ-ಕರುಣೆಯ ಜೀವನ ವ್ಯವಸ್ಥೆಯನ್ನು ತಿಪಾದಿಸುತ್ತದೆಂಬ ಸತ್ಯವನ್ನು ಕನ್ನಡ ಜನತೆಗೆ ತಿಳಿಸಲಿಕ್ಕಾಗಿ ಈ ಕೃತಿ ಹೆಚ್ಚಿನ ಖ್ಯೆಯ ದೇಶಬಾಂಧವರಿಗೆ ತಲುಪುವಂತಾಗಲೆಂದು ಹಾರೈಸುತ್ತೇವೆ.

- ಪ್ರಕಾಶಕರು

# ಅನುಕ್ರಮಣಿಕೆ



---

**ಇದು 21 ಫೆಬ್ರವರಿ 1981ರಲ್ಲಿ, ಹೈದರಾಬಾದಿನ ವಾದಿಯೆಹುದಾದಲ್ಲಿ ನಡೆದ ಜಮಾಅತೆ ಇಸ್ಲಾಮಿ ಹಿಂದ್‌ನ ಆರನೇ ಅಖಿಲಭಾರತ ಸಮ್ಮೇಳನದ 'ಸಹಕಾರಿಗಳ ಸಭೆ'ಯಲ್ಲಿ ಮಾಡಲಾದ ಭಾಷಣವಾಗಿದೆ.**

ಸಕಲ ಮಾನವರ ಸೃಷ್ಟಿಕರ್ತ ಮತ್ತು ಪರಿಪಾಲಕನಾದ ಅಲ್ಲಾಹನಿಗೆ ಸ್ತುತಿಸ್ತೋತ್ರಗಳು. ಮಾನವರಿಗೆ ಅವರ ಲೌಕಿಕ ಮತ್ತು ಪಾರಮಾರ್ಥಿಕ ವಿಜಯದ ಭರವಸೆಯನ್ನೀಯುವ ಧರ್ಮವನ್ನು ಸಮರ್ಪಿಸಿದ ದೇವನ ಸಕಲ ದಾಸರಿಗೆ ಸ್ವಸ್ತಿವಚನಗಳು.

ಪವಿತ್ರ ಕುರ್‌ಆನನ್ನು ತೆರೆಯುತ್ತಲೇ ಮೊಟ್ಟ ಮೊದಲು ನಮ್ಮ ಮುಂದೆ ಬರುವ ವಾಕ್ಯ, "ಪರಮ ದಯಾಮಯನು- ಕರುಣಾಳುವಾದ ಅಲ್ಲಾಹನ ನಾಮದಿಂದ" ಎಂಬುದಾಗಿದೆ. ಕುರ್‌ಆನ್‌ನಲ್ಲಿ ಈ ವಾಕ್ಯ 114 ಬಾರಿ ಪ್ರಸ್ತಾವಿಸಲ್ಪಟ್ಟಿದೆ. ಈ ವಾಕ್ಯದ ಬಳಿಕ ತಕ್ಷಣ ಬಂದಿರುವ ಪ್ರಸ್ತಾಪ "ಸರ್ವಲೋಕಗಳ ಒಡೆಯನಾದ ಅಲ್ಲಾಹನಿಗೆ ಸರ್ವಸ್ತುತಿ" ಎಂಬುದಾಗಿದೆ. ಹೀಗೆ ಪವಿತ್ರ ಕುರ್‌ಆನ್‌ನಲ್ಲಿ ಹಲವು ಕಡೆ ದೇವನ ಅನುಗ್ರಹ ಮತ್ತು ಪ್ರಭುತ್ವದ ಬಗ್ಗೆ ಪ್ರಸ್ತಾವಿಸಲಾಗಿದೆ.

ಕಣ್ತೆರೆದು ನೋಡಿದರೆ ನಮಗೆ ನಾಲ್ಕೂ ನಿಟ್ಟಿನಲ್ಲಿ ದೇವನ ಪ್ರಭುತ್ವ ಮತ್ತು ಅನುಗ್ರಹದ ಕುರುಹುಗಳು ಗೋಚರವಾಗುತ್ತದೆ. ಸಮಸ್ತ ನಿಸರ್ಗವೇ ನಮಗಾಗಿ ಕಾರ್ಯತತ್ಪರವಾಗಿದೆ. ಲೋಕದ ಬಂಡವಾಳಗಳೆಲ್ಲವೂ ನಮಗಾಗಿಯೇ ಇದೆ. (ನಿಮಗಾಗಿ ಭೂಮಿಯಲ್ಲಿರುವ ಸಕಲ ವಸ್ತುಗಳನ್ನೂ ಸೃಷ್ಟಿಸಿದವನು ಅವನೇ ಆಗಿದ್ದಾನೆ. -ಪವಿತ್ರ ಕುರ್‌ಆನ್: 2: 29), ದೇವನ ಅನುಗ್ರಹಗಳು ಅಗಣಿತವಾಗಿವೆ (ಅವನ ಅನುಗ್ರಹಗಳನ್ನು ನೀವು ಲೆಕ್ಕಮಾಡಬಯಸಿದರೆ ಅದು ನಿಮ್ಮಿಂದ ಸಾಧ್ಯವಿಲ್ಲ -ಪವಿತ್ರ ಕುರ್‌ಆನ್: 14:34). ಆದರೆ ಈ ಅನುಗ್ರಹಗಳೆಲ್ಲವೂ ನಿಜಾರ್ಥದಲ್ಲಿ ಅನುಗ್ರಹವಾಗಬೇಕಾದರೆ ಅದರ ಸೂಕ್ತ ಉಪಯೋಗ ನಮಗೆ ತಿಳಿದಿರಬೇಕು. ಅನ್ಯಥಾ ಅದು ಇಹ ಮತ್ತು ಪರಲೋಕಗಳೆರಡರಲ್ಲೂ ಯಾತನೆ ಮತ್ತು ಹಾನಿಗೆ ಕಾರಣವಾಗಬಹುದು. ಅದನ್ನೇ ನಾವಿಂದು ಕಾಣುತ್ತಿದ್ದೇವೆ. ಅಗಣಿತ ಭೌತಿಕ ಪ್ರಗತಿಯ ಹೊರತಾಗಿಯೂ ಮಾನವ ಇಂದು ಅಪಾರ ಸಂಕಷ್ಟಗಳಲ್ಲಿ ಸಿಲುಕಿದ್ದಾನೆ.

ಅಲ್ಲಾಹನ ಅತಿದೊಡ್ಡ ಅನುಗ್ರಹ, ಮಾನವರ ಮಾರ್ಗದರ್ಶನಕ್ಕಾಗಿ ಪ್ರವಾದಿಗಳನ್ನು ಕಳುಹಿಸಿರುವುದಾಗಿದೆ. ದೇವನ ಪ್ರವಾದಿಗಳು ಎಲ್ಲಾ ದೇಶ ಮತ್ತು ಸಮುದಾಯಗಳಲ್ಲಿ ಆಗತರಾಗಿದ್ದಾರೆ. ಅವರು ದೇವನ ಧರ್ಮವನ್ನು ಮಾನವರ ಮುಂದೆ ಸಮರ್ಪಿಸಿದರು. ಮಾನವರ ಜೀವನ, ಆವರ ಪ್ರತಿಷ್ಠೆ ಮತ್ತು ದೇವನು ಅವರಿಗೆ ದಯಪಾಲಿಸಿರುವ ಸಕಲ

ಕಾರುಣ್ಯಗಳ ನೈಜ್ಯ ಧ್ಯೇಯ ಮತ್ತು ಅವುಗಳನ್ನು ಉಪಯೋಗಿಸಬೇಕಾದ ಸರಿಯಾದ ರೀತಿ ಯಾವುದು ಎಂದು ಆ ಧರ್ಮ ನಮಗೆ ಕಲಿಸುತ್ತದೆ. ಪ್ರವಾದಿಗಳ ಪೈಕಿ ಅತ್ಯಂತ ಕೊನೆಗೆ ಮುಹಮ್ಮದ್(ಸ) ಆಗತರಾಗಿದ್ದಾರೆ. ಅವರೊಂದಿಗೆ ದೇವನು ತನ್ನ ಧರ್ಮವನ್ನು ಸಮಾಪ್ತಗೊಳಿಸಿದನು.

"ಇಂದು ನಾನು ನಿಮ್ಮ ಧರ್ಮವನ್ನು ನಿಮಗಾಗಿ ಪರಿಪೂರ್ಣಗೊಳಿಸಿದ್ದೇನೆ. ನನ್ನ ಕೊಡುಗೆಯನ್ನು ನಿಮ್ಮ ಮೇಲೆ ಪರಿಪೂರ್ಣಗೊಳಿಸಿದ್ದೇನೆ ಮತ್ತು ಇಸ್ಲಾಮನ್ನು ನಿಮ್ಮ ಧರ್ಮವೆಂಬ ನೆಲೆಯಲ್ಲಿ ಅಂಗೀಕರಿಸಿದ್ದೇನೆ." (ಪವಿತ್ರ ಕುರ್‌ಆನ್- 5: 3)

ಪ್ರವಾದಿವರ್ಯರನ್ನು(ಸ) ಲೋಕಾಂತ್ಯದ ತನಕ ಸರ್ವ ಮಾನವರ ಕಡೆಗೆ ಪ್ರವಾದಿಯನ್ನಾಗಿ ಮಾಡಿ ಕಳುಹಿಸಲಾಗಿತ್ತು.

"(ಓ ಪ್ರವಾದಿಗಳೇ!) ನಿಮ್ಮನ್ನು ನಾವು ಸಕಲ ಮಾನವರಿಗೆ ಸುವಾರ್ತೆ ಹಾಗೂ ಮುನ್ನೆಚ್ಚರಿಕೆ ಕೊಡುವವರಾಗಿ ಕಳುಹಿಸಿದ್ದೇವೆ." (ಪವಿತ್ರ ಕುರ್‌ಆನ್- 34: 28)

ಪ್ರವಾದಿವರ್ಯರು(ಸ) ತಂದಂತಹ ಈ ಧರ್ಮ ಸಕಲ ಮಾನವರ ಪಾಲಿಗೆ ಅಲ್ಲಾಹನ ಅತಿ ದೊಡ್ಡ ಅನುಗ್ರಹವಾಗಿದೆ. ಅದರಲ್ಲಿ ಮಾನವಕುಲದ ಪಾಲಿಗೆ ನ್ಯಾಯ ಮತ್ತು ನೀತಿ ಇದೆ. ಸರ್ವಾಂಗೀಣ ಪ್ರಗತಿ ಹಾಗೂ ಉಭಯ ಲೋಕಗಳ ವಿಜಯವೂ ಅದರಲ್ಲೇ ಅಡಕವಾಗಿದೆ. ಆದ್ದರಿಂದಲೇ ಈ ಧರ್ಮವನ್ನು ತಂದ ಮತ್ತು ಅದನ್ನು ಜಾರಿಗೊಳಿಸಿದ ಪ್ರವಾದಿಯನ್ನು ಅಲ್ಲಾಹನು ಲೋಕಾನುಗ್ರಹಿ ಎಂದು ಬಣ್ಣಿಸಿದ್ದಾನೆ.

"ನಿಮ್ಮನ್ನು ನಾವು ಸಮಸ್ತ ಲೋಕಕ್ಕೆ ಅನುಗ್ರಹವಾಗಿಯೇ ಕಳುಹಿಸಿದ್ದೇವೆ" (ಪವಿತ್ರ ಕುರ್‌ಆನ್- 21 :107)

ಈ ಧರ್ಮ ಯಾವ ರೀತಿ ಮಾನವಕುಲಕ್ಕೆ ಅನುಗ್ರಹೀತವಾಗಿದೆ ಎಂಬುದನ್ನು ನಾವು ಪರಿಶೀಲಿಸಿ ನೋಡೋಣ. ಯಾವುದೇ ವ್ಯವಸ್ಥೆ ಅನುಗ್ರಹೀತ ವ್ಯವಸ್ಥೆಯಾಗಿ ಮಾರ್ಪಡಬೇಕಾದರೆ ಅದು ಮಾನವ ಕುಲಕ್ಕೆ ಈ ಕೆಳಗಿನ ಕೆಲವೊಂದು ಅಂಶಗಳನ್ನು ಪ್ರದರ್ಶಿಸಬೇಕು-

1. ನೈಜ ಸ್ವಾತಂತ್ರ್ಯ.
2. ಕೀರ್ತಿ ಮತ್ತು ಉತ್ತುಂಗತೆ.
3. ನ್ಯಾಯ - ನೀತಿ.
4. ಒಳಿತಿನ ಸಂಸ್ಥಾಪನೆ ಮತ್ತು ಕೆಡುಕಿನ ಉಚ್ಚಾಟನೆ.
5. ಸರ್ವಾಂಗೀಣ ಪ್ರಗತಿ.
6. ಸಕಲ ಮಾನವರ ಸರ್ವ ವಿಧ ಸಮಸ್ಯೆಗಳಿಗೆ ಪರಿಹಾರ.
7. ಮಾನವೀಯ ಏಕತೆ.
8. ಶಾಂತಿ ಮತ್ತು ನೆಮ್ಮದಿ.

9. ದೇವ ಸಂಪ್ರೀತಿ.
10. ಪರಲೋಕದ ಶಾಶ್ವತ ವಿಜಯ.

ಇಸ್ಲಾಮ್ ಮಾನವ ಕುಲಕ್ಕೆ ಈ ಎಲ್ಲಾ ಅನುಗ್ರಹಗಳನ್ನೂ ದಯಪಾಲಿಸುತ್ತದೆ.

## 1. ಸ್ವಾತಂತ್ರ್ಯ

ಮಾನವನು ಮೂಲತಃ ದೇವನ ದಾಸನಾಗಿ ಜನ್ಮತಾಳುತ್ತಾನೆ. ಜನ್ಮತಃ ಅವನು ಅಲ್ಲಾಹನ ಹೊರತು ಬೇರಾರ ದಾಸನೂ ಅಲ್ಲ. ಆದರೆ ಪ್ರಜ್ಞಾವಂತನಾಗುತ್ತಲೇ ಅವನು ಸ್ವತಃ ಕುಟುಂಬದ ಸಂಪ್ರದಾಯ ಹಾಗೂ ಸಮಾಜದ ಕಟ್ಟುಪಾಡುಗಳಲ್ಲಿ ಬಂಧಿತನಾಗಿರುವ ಸ್ಥಿತಿಯಲ್ಲಿರುತ್ತಾನೆ. ಅನಂತರ ದೇವತ್ವದ ಪಟ್ಟಕ್ಕೇರಿರುವ ಧಾರ್ಮಿಕ ಮುಖಂಡರನ್ನು ಅವನು ಎದುರಿಸಬೇಕಾಗುತ್ತದೆ. ಅವರ ಮುಂದೆ ಅವನು ಶಿರಬಾಗಬೇಕಾಗುತ್ತದೆ. ಬುದ್ಧಿಗೆ ನಿಲುಕದ ಮೂಢನಂಬಿಕೆಗಳನ್ನು ನಂಬಬೇಕಾಗುತ್ತದೆ. ಅಗಣಿತ ದೇವರುಗಳನ್ನು ಪೂಜಿಸಬೇಕಾಗುತ್ತದೆ. ಅನಂತರ ರಾಜರು ಮತ್ತು ಆಡಳಿತಗಾರರ ಸರದಿ ಬರುತ್ತದೆ. ಅವರು ದೇಶದ ಸಮಸ್ತ ಜನಸ್ತೋಮವನ್ನು ತಮ್ಮ ಬಾಹುಗಳಲ್ಲಿ ಬಂಧಿಸಿರುತ್ತಾರೆ. ದೇಶವಾಸಿಗಳು ಅವರ ಶೋಷಣೆ, ದಬ್ಬಾಳಿಕೆ ಮತ್ತು ಅಕ್ರಮದ ಕಾನೂನುಗಳಡಿಯಲ್ಲಿ ಅಪ್ಪಚ್ಚಿಯಾಗಿ ಬಿಡುತ್ತಾರೆ.

ಪ್ರಜಾಪ್ರಭುತ್ವ ಮಾನವರ ಮುಂದೆ ಅನೇಕ ವಾದಗಳನ್ನೊಡ್ಡಿತು. ರಾಜಾಡಳಿತದಿಂದ ಮಾನವನಿಗೆ ಮುಕ್ತಿ ದೊರೆಯುವುದು, ಅವನಿಗೆ ನೈಜ ಸ್ವಾತಂತ್ರ್ಯವನ್ನೊದಗಿಸುವುದು, ಮಾನವ ಸ್ವತಃ ಪ್ರಭುವೆನಿಸಿಕೊಳ್ಳುವನು ಇತ್ಯಾದಿ. ಆದರೆ ಸಂಭವಿಸಿದ್ದೇನು? ಕೆಲವು ಚಾಣಾಕ್ಷರು ತಮ್ಮ ಬಂಡವಾಳ, ವರ್ಚಸ್ಸು ಮತ್ತು ನಿರ್ಮಾಣ-ಸಂಹಾರಗಳ ಬಲದಿಂದ ಜನರನ್ನು ಪ್ರತಿನಿಧಿಸುವ ಹೆಸರಲ್ಲಿ ಅವರ ಪ್ರಭುಗಳಾಗಿ ಮಾರ್ಪಟ್ಟರು. ಅನಂತರ ತಮ್ಮ ಅಭಿಲಾಶೆ ಮತ್ತು ಸ್ವಾರ್ಥಗಳಿಗಾಗಿ ಅವರ ಶೋಷಣೆ ಮಾಡತೊಡಗಿದರು. ಜಗತ್ತಿನ ಎಲ್ಲೆಡೆಗಳಲ್ಲಿಯೂ ಪ್ರಜಾಪ್ರಭುತ್ವ ಇದೇ ಪಾತ್ರವನ್ನು ವಹಿಸುತ್ತಿದೆ.

ಅನಂತರ ಸಮತಾವಾದ ರಂಗಪ್ರವೇಶ ಮಾಡಿತು. ಬಂಡವಾಳಶಾಹೀ ಪ್ರಭುತ್ವದ ಶಾಪದಿಂದ ಮಾನವಕುಲವನ್ನು ವಿಮೋಚಿಸುವುದಾಗಿ ಅದು ವಾದಿಸಿತು. ಕಾರ್ಮಿಕರ ಸರ್ವಾಧಿಕಾರದ ಸೋಗಿನಲ್ಲಿ ಅದು ಅತ್ಯಂತ ಭಯಾನಕವಾದ ಸರ್ವವ್ಯಾಪಿ ಸವಾರ್ಧಿಕಾರವನ್ನು ಸ್ಥಾಪಿಸಿತು. ಅಂತಹ ಸರ್ವಾಧಿಕಾರಕ್ಕೆ ಮಾನವ ಇತಿಹಾಸದಲ್ಲಿ ಬೇರೆ ಉದಾಹರಣೆ ಕಂಡು ಬರುವುದಿಲ್ಲ. ಅದು ಚಿಂತನೆ ಮತ್ತು ಅಭಿವ್ಯಕ್ತಿಯ ಸ್ವಾತಂತ್ರ್ಯವೂ ಸೇರಿದಂತೆ ಸರ್ವವಿಧ ಸ್ವಾತಂತ್ರ್ಯದಿಂದ ಮಾನವನನ್ನು ವಂಚಿಸಿತು.

ಅನಂತರ ಜಗತ್ತಿನ ಪ್ರಬಲ ರಾಷ್ಟ್ರಗಳ ಸರದಿ ಬರುತ್ತದೆ. ಅವು ದುರ್ಬಲ ಮತ್ತು ಹಿಂದುಳಿದ ರಾಷ್ಟ್ರಗಳನ್ನು ಆರ್ಥಿಕವಾಗಿ ಮತ್ತು ರಾಜಕೀಯವಾಗಿ ಗುಲಾಮರನ್ನಾಗಿ ಮಾಡುತ್ತಿವೆ. ಸಮತಾವಾದದ ವಕ್ತಾರವಾಗಿರುವ ರಷ್ಯಾ ಮತ್ತು ಪ್ರಜಾಪ್ರಭುತ್ವದ

ಧ್ವಜವಾಹಕವಾಗಿರುವ ಅಮೇರಿಕ ಜಗತ್ತಿನ ಪ್ರಬಲ ಶಕ್ತಿಗಳಾಗಿವೆ (ಇದು ಶೀತಲ ಸಮರಕ್ಕೆ ಮೊದಲು ಬರೆಯಲಾದ ಪುಸ್ತಕ- ಅನುವಾದಕ). ಈ ಎರಡೂ ರಾಷ್ಟ್ರಗಳು ಜಗತ್ತಿನ ಸಕಲ ರಾಷ್ಟ್ರಗಳನ್ನು ತಮ್ಮ ರಾಜಕೀಯ ಮತ್ತು ಆರ್ಥಿಕ ಗುಲಾಮತನದಲ್ಲಿ ಬಂಧಿಸ ಬಯಸುತ್ತಿವೆ. ಈ ಉದ್ದೇಶ ಸಾಧನೆಗಾಗಿ ಅವು ಸಂಚು ಹೂಡಲು, ಸೇನಾಕ್ರಾಂತಿ ನಡೆಸಲು, ರಾಷ್ಟ್ರ ನಾಯಕರ ಕೊಲೆ ನಡೆಸಲು, ಸೇನಾಧಾಳಿ ಹೂಡಲು ಅಥವಾ ವ್ಯಾಪಕ ನರಮೇಧ ಮತ್ತು ರಕ್ತಪಾತವನ್ನು ನಡೆಸುವುದೇ ಮುಂತಾದ ಯಾವುದೇ ಕೃತ್ಯವನ್ನು ಕೈಗೊಳ್ಳಲಿಕ್ಕೂ ಹಿಂಜರಿಯುವುದಿಲ್ಲ. ಕಂಪೋಚಿಯಾ ಮತ್ತು ಅಫಘಾನಿಸ್ತಾನದ ಉದಾಹರಣೆಗಳು ನಮ್ಮ ಮುಂದಿವೆ.

ಗುಲಾಮತನದ ಈ ಕೈಕೋಳ ಮತ್ತು ಸಂಕೋಲೆಗಳು ಇಂದು ಮಾನವಕುಲದ ದೇಹವನ್ನು ಬಿಗಿದು ಕಟ್ಟಿವೆ. ಈ ಬಂಧನಗಳು ಮುರಿದು ಬಿದ್ದರೆ ಅವನು ತನ್ನ ಕುರುಡು ಸ್ವೇಚ್ಛೆಗಳ ಗುಲಾಮನಾಗಿ ಮಾರ್ಪಡುತ್ತಾನೆ. ಅದು ಅವನನ್ನು ಉಭಯಲೋಕಗಳ ವಿನಾಶಕ್ಕೆ ಗುರಿಪಡಿಸುತ್ತವೆ.

ಮಾನವನಿಗೆ ಈ ಮಾರಕ ಗುಲಾಮತನದಿಂದ ವಿಮೋಚನೆ ಪಡೆಯಲು ಸಾಧ್ಯವಿಲ್ಲವೇ? ಸಾಧ್ಯವಿದೆ. ಅದಕ್ಕೆ ಅವನು ಯಾರ ಆಜನ್ಮ ದಾಸನಾಗಿದ್ದಾನೋ ಆ ದೇವನ ನೈಜ ದಾಸ್ಯವನ್ನು ಸ್ವೀಕರಿಸಲು ಸನ್ನದ್ಧ ನಾಗಬೇಕಾಗಿದೆ. ಅವನ ದಾಸ್ಯವನ್ನು ಸ್ವೀಕರಿಸುವುದರಲ್ಲೇ ಅವನ ಲೌಕಿಕ ಮತ್ತು ಪಾರಲೌಕಿಕ ವಿಜಯ ಅಡಕವಾಗಿದೆ. ಅದು ಅವನ ಸ್ವೇಚ್ಛೆಗಳ ದಾಸ್ಯವಾಗಿರಬಹುದು, ಕುಟುಂಬದ ರೀತಿರಿವಾಜುಗಳ ದಾಸ್ಯವಾಗಿರಬಹುದು, ಧಾರ್ಮಿಕ ನಾಯಕರುಗಳ ಅಥವಾ ರಾಜಕೀಯ ಪ್ರಭುಗಳ ದಾಸ್ಯವಾಗಿರಬಹುದು. ದೇವನ ಕಾನೂನಿನ ಹೊರತು ಇತರೆಲ್ಲ ಕಾನೂನುಗಳನ್ನು ಅವನು ಸಮ್ಮತಿಸಲು ನಿರಾಕರಿಸಬೇಕಾಗಿದೆ. ದೇವನ ನಂತರ ದೈವಿಕ ಕಾನೂನುಗಳನ್ನು ಜಾರಿಗೊಳಿಸುವ ಮತ್ತು ಭೂಮಿಯಲ್ಲಿ ದೇವೇಚ್ಛೆಯನ್ನು ಈಡೇರಿಸುವ ಜನರನ್ನು ಮಾತ್ರವೇ ಅವನು ಅನುಸರಿಸಬೇಕಾಗಿದೆ.

## 2. ಗೌರವ ಮತ್ತು ಔನ್ನತ್ಯ

ಗೌರವ ಮತ್ತು ಔನ್ನತ್ಯವು ವ್ಯಕ್ತಿ ಮತ್ತು ಸಮಾಜದ ಪಾಲಿಗೆ ಊಟ, ಉಡುಗೆ ಮತ್ತು ಭೌತಿಕ ಅವಶ್ಯಕತೆಗಳಿಗಿಂತಲೂ ಮುಖ್ಯವಾದುದು. ಅಗೌರವದ ಜೀವನಕ್ಕಿಂತ ಮರಣವೇ ಉತ್ತಮ. ಆದರೆ ಜನಸಾಮಾನ್ಯನು ಇಂದು ಗೌರವ ಮತ್ತು ಔನ್ನತ್ಯದಿಂದ ವಂಚಿತನಾಗಿದ್ದಾನೆ. ಸಂಪತ್ತು ಮತ್ತು ಅಧಿಕಾರ ಉಳ್ಳವರಿಗಷ್ಟೇ ಇಂದು ಗೌರವ ಮತ್ತು ಔನ್ನತ್ಯವಿದೆ. ಬಡವರಿಗೆ ಮತ್ತು ಅಧೀನದಲ್ಲಿರುವವರ ಪಾಲಿಗೆ ನಿಂದ್ಯತೆ ಮತ್ತು ಹೀನತೆಯ ವಿನಾ ಬೇರೇನೂ ಇಲ್ಲ. ಕರಿಯರು ಇಂದಿಗೂ ಬಿಳಿಯರ ದೃಷ್ಟಿಯಲ್ಲಿ ನಿಂದ್ಯರಾಗಿದ್ದಾರೆ. ನಮ್ಮ ದೇಶದಲ್ಲೇ ಅಸ್ಪೃಶ್ಯತೆ ಮತ್ತು ಉಚ್ಚನೀಚತೆಯ ಮಾರಕ ರೋಗ ವ್ಯಾಪಕವಾಗಿದೆ. ಕೋಟಿ ಗಟ್ಟಲೆ ಜನರು

ಅದಕ್ಕೆ ಈಡಾಗಿದ್ದಾರೆ. ರಾಜಕೀಯ ಮತ್ತು ಧಾರ್ಮಿಕ ನೇತಾರರು ಇಂದಿಗೂ ಜನರ ಶಿರಗಳು ತಮ್ಮ ಮುಂದೆ ಬಾಗುವಂತೆ ಮಾಡುತ್ತಿದ್ದಾರೆ. ಇಂದಿಗೂ ಮಾನವ ಅತ್ಯಂತ ಹೇಯ ಮತ್ತು ನಿಕೃಷ್ಟ ವಸ್ತುಗಳನ್ನು ಪೂಜಿಸುತ್ತಿದ್ದಾನೆ. ಪಾಶ್ಚಿಮಾತ್ಯ ಸಂಸ್ಕೃತಿ ಮಾನವನನ್ನು ಪ್ರಾಣಿಯಂತೆ ಪರಿಗಣಿಸುತ್ತಿದೆ. ಮಾನವನಿಗೆ ಘನತೆ-ಗೌರವದ ಸ್ಥಾನವನ್ನು ದೊರಕಿಸಿಕೊಡುವ ಧರ್ಮ ಇಂದು ಯಾವುದಿದೆ? ವಂಶ, ವರ್ಣ, ರಾಷ್ಟ್ರ, ವೃತ್ತಿ, ಹಣ ಮತ್ತು ಅಧಿಕಾರದ ಬದಲು ಮಾನವತೆಯ ಆಧಾರದಲ್ಲಿ ಮಾನವನಿಗೆ ಗೌರವ ಸಲ್ಲುವಂತಹ ಜೀವನ ವ್ಯವಸ್ಥೆ ಯಾವುದಿದೆ?

ಇಸ್ಲಾಮ್ ಮಾತ್ರವೇ ಅಂತಹ ಪದ್ಧತಿಯಾಗಿದೆ. ಅದರ ದೃಷ್ಟಿಯಲ್ಲಿ ಮಾನವರೆಲ್ಲರೂ ಸಮಾನರು. ಎಲ್ಲರೂ ಒಂದೇ ದೇವನ ದಾಸರು ಮತ್ತು, ಆದಿಮಾನವರಾದ ಆದಮ್ ಮತ್ತು ಹವ್ವಾರ ಸಂತತಿಗಳು. ಉದ್ಯೋಗ, ವಂಶ, ರಾಷ್ಟ್ರ, ವರ್ಣ, ಸಂಪತ್ತು ಅಥವಾ ಸರಕಾರದ ಆಧಾರದಲ್ಲಿ ಅವರ ನಡುವೆ ಯಾವುದೇ ತಾರತಮ್ಯವಿಲ್ಲ. ಮಾನವರ ಪೈಕಿ ಯಾರೂ ದೇವತಾಪುತ್ರರಲ್ಲ. ಯಾರೂ ಹುಟ್ಟು ಪಾಪಿಗಳಲ್ಲ. ಮಾನವರೆಂಬ ನೆಲೆಯಲ್ಲಿ ಎಲ್ಲರೂ ಘನತೆ-ಗೌರವಗಳಿಗೆ ಅರ್ಹರು. ಮಾನವರ ಶಿರ ದೇವನ ವಿನಾ ಮತ್ತಾರ ಮುಂದೆಯೂ ಬಾಗುವಂತಿಲ್ಲ. ಅಲ್ಲಾಹನ ವಿನಾ ಯಾರನ್ನೂ ಮಾನವ ಆರಾಧನಾರ್ಹವೆಂದು ಪರಿಗಣಿಸುವಂತಿಲ್ಲ. ಅವನು ಸೃಷ್ಟಿಗಳ ಪೈಕಿ ಪರಮ ಶ್ರೇಷ್ಠನು. ದೇವಚರರ ಸಾಷ್ಟಾಂಗಕ್ಕೆ ಪಾತ್ರನಾದವನು. ಅವನು ಭೂಮಿಯಲ್ಲಿ ನಿಸರ್ಗದೊಡೆಯನನ್ನು ಪ್ರತಿನಿಧಿಸಬೇಕಾದವನು. ಅವನ ಸ್ಥಾನ ಎಷ್ಟು ಶ್ರೇಷ್ಠವಾಗಿದೆಯೆಂದರೆ ಅದಕ್ಕಿಂತ ಉನ್ನತವಾದ ಸ್ಥಾನದ ಬಗ್ಗೆ ಊಹಿಸಲಿಕ್ಕೂ ಸಾಧ್ಯವಿಲ್ಲ.

ಹಾಗೆಯೇ ಇಸ್ಲಾಮ್ ಮಾನವನಿಗೆ ಇಹ-ಪರಗಳಲ್ಲಿ ಕೀರ್ತಿ-ಗೌರವಗಳನ್ನು ದೊರಕಿಸಿಕೊಡಬಲ್ಲ ಹಾಗೂ ದೇವನ ಮತ್ತು ಮಾನವರೆದುರು ವಿಜಯಿಯಾಗಿ ಮಾಡಬಲ್ಲ ಗುಣಗಳನ್ನು ಗುರುತಿಸುತ್ತದೆ. ವ್ಯಕ್ತಿ ಮತ್ತು ಸಮಾಜದಲ್ಲಿ ಆ ಗುಣ ವಿಶೇಷತೆಗಳನ್ನು ಬೆಳೆಸಲು ಅದು ಶ್ರಮಿಸುತ್ತದೆ. ಆ ಗುಣಗಳಾವುವೆಂದರೆ, ಸತ್ಯದ ಬಗ್ಗೆ ಜ್ಞಾನ ಮತ್ತು ವಿಶ್ವಾಸ, ಅಲ್ಲಾಹನ ದಾಸ್ಯ ಮತ್ತು ಅನುಸರಣೆ, ಉನ್ನತ ಚಾರಿತ್ರ್ಯ, ದೇವಮಾರ್ಗದಲ್ಲಿ ತಾಳ್ಮೆ ಮತ್ತು ಸ್ಥಿರತೆ, ಧರ್ಮ ಸಂಸ್ಥಾಪನೆಗಾಗಿ ಹೋರಾಟ.

ಅರಬರು ಅಜ್ಞಾತ, ಹಿಂದುಳಿದ, ದರಿದ್ರ ಮತ್ತು ಅಜ್ಞಾನದಿಂದ ಕೂಡಿದ ಜನರಾಗಿದ್ದರು. ಆದರೆ ಇಸ್ಲಾಮನ್ನು ಅಂಗೀಕರಿಸಿ, ಈ ಸ್ತುತ್ಯ ಗುಣವಿಶೇಷತೆಗಳನ್ನು ತಮ್ಮದಾಗಿಸಿಕೊಂಡಾಗ ತೀವ್ರ ಪ್ರತಿರೋಧಗಳ ಹೊರತಾಗಿಯೂ ಘನತೆ-ಗೌರವಗಳ ಉಚ್ಛ್ರಾಯಕ್ಕೆ ತಲುಪಿದರೆಂಬುದಕ್ಕೆ ಇತಿಹಾಸವೇ ಸಾಕ್ಷಿ. ಜಗತ್ತಿನ ಅಗಿನ ಮಹಾಶಕ್ತಿಗಳಾದ ಇರಾನ್ ಮತ್ತು ರೋಮ್‌ನ ಸಾಮ್ರಾಜ್ಯಗಳು ಶಕ್ತಿಯುತವಾಗಿ ಅವರನ್ನು ದಮನಿಸಲು ಪ್ರಯತ್ನಿಸಿದುವು. ಆದರೆ ಮಹಾಶಕ್ತಿಗಳು ಸ್ವತಃ ನಾಮಾವಶೇಷವಾದವು. ಇಸ್ಲಾಮಿನ

ವಕ್ತಾರರು ಪ್ರಬಲ ಶಕ್ತಿಯಾಗಿ ಜಗತ್ತಿನಲ್ಲಿ ಪಸರಿಸುತ್ತಾ ಹೋದರು. ಅದು ದೇವನ ವಾಗ್ದಾನದ ಸಾಕ್ಷಾತ್ಕಾರವಾಗಿತ್ತು. ದೇವನ ಈ ವಾಗ್ದಾನ ಇಂದಿಗೂ ಪ್ರಸ್ತುತವಾಗಿದೆ. ಘನತೆ-ಗೌರವಗಳು ಅವನ ಹಸ್ತದಲ್ಲೇ ಇದೆ. ಇಸ್ಲಾಮಿನ ನೈಜ ವಕ್ತಾರರನ್ನು ಗೌರವಕ್ಕೀಡು ಮಾಡುವುದು ದೇವನ ವಾಗ್ದಾನವಾಗಿದೆ.

"ವಾಸ್ತವದಲ್ಲಿ ಗೌರವವಂತೂ ಅಲ್ಲಾಹ್, ಅವನ ಸಂದೇಶವಾಹಕರು ಮತ್ತು ಸತ್ಯವಿಶ್ವಾಸಿಗಳಿಗಾಗಿಯೇ ಇದೆ." (ಪವಿತ್ರ ಕುರ್‌ಆನ್- 63: 8)

"ನೀವು ಧೈರ್ಯಗುಂದ ಬೇಡಿರಿ. ವ್ಯಥೆ ಪಡಲೂ ಬೇಡಿರಿ. ನೀವು ವಿಶ್ವಾಸಿಗಳಾಗಿದ್ದರೆ ನೀವೇ ವಿಜಯಿಗಳಾಗುವಿರಿ." (ಪವಿತ್ರ ಕುರ್‌ಆನ್- 3: 139)

## 3. ನ್ಯಾಯ-ನೀತಿ

ನ್ಯಾಯ ಪರಿಪಾಲನೆಯಲ್ಲೇ ವ್ಯಕ್ತಿಯ ಭದ್ರತೆ ಮತ್ತು ಪ್ರಗತಿ ಅಡಕವಾಗಿದೆ. ಅದರ ಆಧಾರದಲ್ಲೇ ಸಮಾಜದ ನಿರ್ಮಾಣವಾಗುತ್ತದೆ. ಅದರಲ್ಲೇ ಸಮಾಜದ ಪ್ರಗತಿ ಮತ್ತು ಯಶಸ್ಸು ಅಡಕವಾಗಿದೆ. ಆದರೆ ಶಿಕ್ಷಣ, ನಾಗರಿಕತೆ ಮತ್ತು ವೈಜ್ಞಾನಿಕ ರಂಗದಲ್ಲಿ ಆಗಿರುವ ಸರ್ವವಿಧ ಪ್ರಗತಿಯ ಹೊರತಾಗಿಯೂ ಇಂದು ನ್ಯಾಯ-ನೀತಿ ಎಲ್ಲಿಯೂ ಕಂಡು ಬರುವುದಿಲ್ಲ. ವ್ಯಕ್ತಿಗಳು ವ್ಯಕ್ತಿಗಳ ಮೇಲೆ, ವಂಶಗಳು-ವಂಶಗಳ ಮೇಲೆ, ವರ್ಗಗಳು ವರ್ಗಗಳ ಮೇಲೆ, ಉನ್ನತ ಜಾತಿಯವರು ಕೆಳಜಾತಿಯವರ ಮೇಲೆ, ರಾಷ್ಟ್ರಗಳು ಇತರ ರಾಷ್ಟ್ರಗಳ ಮೇಲೆ ದಬ್ಬಾಳಿಕೆ ನಡೆಸುತ್ತಿವೆ. ಕೋಮು ಗಲಭೆಗಳು, ವರ್ಗ ಸಂಘರ್ಷಗಳು ಮತ್ತು ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಕಲಹಗಳು ಮುಂತಾದ ಎಲ್ಲವೂ ಈ ಕಾರಣದಿಂದಲೇ ನಡೆಯುತ್ತಿವೆ. ಮಾನವನ ಪ್ರಾಣ, ಮಾನ ಮತ್ತು ಸೊತ್ತುಗಳಿಗೆ ಇಂದು ಯಾವುದೇ ಬೆಲೆಯಿಲ್ಲದಾಗಿದೆ. ಸಮಸ್ತ ಜಗತ್ತು ಇಂದು ಒಳಸಂಚು, ವಿಚ್ಛಿದ್ರತೆ, ಶೀತಲ ಸಮರ ಮತ್ತು ಯುದ್ಧಗಳ ಆಗರವಾಗಿ ಬಿಟ್ಟಿದೆ. ಅತ್ಯಂತ ಭಯಾನಕವಾದ ಶಸ್ತ್ರಾಸ್ತ್ರ ಸಮರ ತೀವ್ರ ಗತಿಯಲ್ಲಿ ಮುಂದುವರಿದಿದೆ. ಕೋಟಿ ಗಟ್ಟಲೆ ಮಾನವರ ಸಮಸ್ಯೆಗಳನ್ನು ಪರಿಹರಿಸಬಹುದಾಗಿದ್ದ ಬಿಲಿಯಗಟ್ಟಳೆ ರೂಪಾಯಿಗಳು ಇಂದು ಶಸ್ತ್ರಾಸ್ತ್ರಗಳ ನಿರ್ಮಾಣ ಮತ್ತು ಪೂರೈಕೆಗಾಗಿ ಬಲಿಯಾಗುತ್ತಿದೆ. ಇಂದು ಮಾನವ ಕುಲ ಎದುರಿಸುತ್ತಿರುವ ಎಲ್ಲ ಸಮಸ್ಯೆಗಳಿಗೂ ಈ ಶೋಷಣೆ ಮತ್ತು ಅನ್ಯಾಯಗಳೇ ಕಾರಣವಾಗಿದೆ. ಯಾವುದೇ ರಾಷ್ಟ್ರ, ಸಮುದಾಯ, ಪಕ್ಷ ಅಥವಾ ವ್ಯವಸ್ಥೆ ಇಂದು ನ್ಯಾಯವನ್ನು ಪ್ರತಿಪಾದಿಸುತ್ತಿಲ್ಲ. ಎಲ್ಲೆಡೆಯೂ ಅಕ್ರಮ-ಅನ್ಯಾಯ ಮತ್ತು ದುಷ್ಟ ಕಾನೂನುಗಳು ರಾರಾಜಿಸುತ್ತಿವೆ. ಪರಿಣಾಮವಾಗಿ ಸಮಸ್ತ ಜಗತ್ತು ಕ್ಷೋಭೆಗೀಡಾಗಿದೆ.

"ಜನರ ಸ್ವಂತ ಕೈಗಳ ದುಡಿಮೆಯಿಂದ ನೆಲ-ಜಲಗಳಲ್ಲಿ ಕ್ಷೋಭೆಯುಂಟಾಗಿ ಬಿಟ್ಟಿದೆ." (ಸೂರಃ ಅರ್ರೂಮ್: 41)

ಈ ಭಯಾನಕ ಪರಿಸ್ಥಿತಿಗೆ ಒಂದು ನಿವಾರಣೋಪಾಯವಿದೆ. ದೇವನು ಕಳುಹಿಸಿರುವ ನ್ಯಾಯ-ನೀತಿ ಆಧಾರಿತವಾದ ವ್ಯವಸ್ಥೆಯನ್ನು ಅಂಗೀಕರಿಸುವುದೇ ಅದರ ಪರಿಹಾರ. ಅಲ್ಲಾಹನ ಧರ್ಮದ ಆಗಮನೋದ್ದೇಶವೇ ಪರಲೋಕ ವಿಜಯಕ್ಕಿಂತ ಮೊದಲು ಲೋಕದ ಜನರಿಗೆ ನ್ಯಾಯ-ನೀತಿಯ ಅನುಗ್ರಹವನ್ನು ದಯಪಾಲಿಸುವುದಾಗಿದೆ, "ನಾವು ನಮ್ಮ ಸಂದೇಶವಾಹಕರನ್ನು ಸುವ್ಯಕ್ತ ನಿದರ್ಶನಗಳು ಮತ್ತು ಸನ್ಮಾರ್ಗದರ್ಶನದೊಂದಿಗೆ ಕಳುಹಿಸಿದೆವು. ಜನರು ನ್ಯಾಯದಲ್ಲಿ ಸ್ಥಿರವಾಗಿ ನಿಲ್ಲಲೆಂದು ಅವರ ಜೊತೆಗೆ ಗ್ರಂಥ ಮತ್ತು ತಕ್ಕಡಿಯನ್ನು ಅವತೀರ್ಣಗೊಳಿಸಿದೆವು." (ಸೂರಃ ಅಲ್‌ಹದೀದ್: 25)

ದೇವನು ಶೋಷಣೆಯಿಂದ ಸಂಪೂರ್ಣ ಮುಕ್ತನಾಗಿದ್ದಾನೆ. ಅವನು ಎಲ್ಲರ ಮೇಲೆ ತನ್ನ ಅನುಗ್ರಹದ ಮಳೆಗರೆಯುತ್ತಿದ್ದಾನೆ. ಅವನ ಕಾನೂನುಗಳು ಶೋಷಣೆಯಿಂದ ಮುಕ್ತವಾಗಿವೆ. ದೇವನ ಕಾನೂನುಗಳಲ್ಲಿ ಎಲ್ಲರಿಗೂ ನ್ಯಾಯವಿದೆ. ಶಾಂತಿ ಮತ್ತು ನೆಮ್ಮದಿಯಿದೆ. ಸರ್ವರ ಹಕ್ಕುಗಳ ಸಂರಕ್ಷಣೆಯಿದೆ. ಇತರೆಲ್ಲಾ ಧರ್ಮ ಮತ್ತು ವ್ಯವಸ್ಥೆಗಳಿಗಿಂತ, ಇಸ್ಲಾಮ್ ಮಾನವೀಯ ಹಕ್ಕುಗಳಿಗೆ ಅತಿ ಹೆಚ್ಚು ಮಹತ್ವ ಕಲ್ಪಿಸುತ್ತದೆ. ನ್ಯಾಯಕ್ಕೆ ಸಂಬಂಧಿಸಿದಂತೆ ಅದು ತಮ್ಮವರು-ಪರರು, ಮುಸ್ಲಿಮರು-ಮುಸ್ಲಿಮೇತರರು, ಮಿತ್ರ-ಶತ್ರು ಎಂಬ ಯಾವ ಭೇದವನ್ನೂ ಕಲ್ಪಿಸುವುದಿಲ್ಲ. ಅದು ಶತ್ರುಗಳೊಂದಿಗೂ ನ್ಯಾಯ ಪಾಲಿಸಬೇಕೆಂದು ಆದೇಶಿಸುತ್ತದೆ.

"ಒಂದು ವಿಭಾಗದ ಮೇಲಿನ ದ್ವೇಷವು ನಿಮ್ಮನ್ನು ನ್ಯಾಯದಿಂದ ವಿಮುಖರಾಗುವಷ್ಟು ರೇಗಿಸದಿರಲಿ. ನ್ಯಾಯ ಪಾಲಿಸಿರಿ. ಇದು ದೇವಭಯಕ್ಕೆ ಹೆಚ್ಚು ಅನುಗುಣವಾಗಿರುತ್ತದೆ."

(ಸೂರಃ ಅಲ್ ಮಾಯಿದಃ: 8)

ಅದು ಸಕಲ ಮಾನವರ ಪ್ರಾಣ, ಮಾನ ಮತ್ತು ಸೊತ್ತು-ವಿತ್ತಗಳು ಸಮಾನವಾಗಿ ಗೌರವಾರ್ಹವೆಂದು ಪರಿಗಣಿಸುತ್ತದೆ. ಒಬ್ಬ ವ್ಯಕ್ತಿಯನ್ನು ಅನ್ಯಾಯವಾಗಿ ವಧಿಸುವುದು ಸಕಲ ಮಾನವರ ವಧೆಗೆ ಸಮಾನ ಮತ್ತು ಒಬ್ಬ ವ್ಯಕ್ತಿಯನ್ನು ರಕ್ಷಿಸುವುದು ಸಕಲ ಮಾನವ ಕುಲದ ರಕ್ಷಣೆಗೆ ಸಮಾನವೆಂದು ಅದು ಸಾರುತ್ತದೆ,

"ಒಬ್ಬ ಮಾನವನ ಕೊಲೆಯ ಬದಲಿಗೆ ಅಥವಾ ಭೂಮಿಯಲ್ಲಿ ಕ್ಷೋಭೆಯನ್ನುಂಟು ಮಾಡುವ ಕಾರಣಕ್ಕಾಗಿ ಹೊರತು ಯಾರಾದರೂ ಒಬ್ಬ ಮನುಷ್ಯನನ್ನು ವಧಿಸಿದರೆ ಅವನು ಸಕಲ ಮಾನವ ಕೋಟಿಯನ್ನೇ ವಧಿಸಿದಂತೆ ಮತ್ತು ಒಬ್ಬನು ಇನ್ನೊಬ್ಬನಿಗೆ ಜೀವದಾನ ಮಾಡಿದರೆ ಅವನು ಮಾನವ ಕೋಟಿಗೆ ಜೀವದಾನ ಮಾಡಿದಂತೆ."

(ಪವಿತ್ರ ಕುರ್‌ಆನ್, 5: 32)

ಹಾಗೆಯೇ ಲೋಕದಲ್ಲಿ ಯಾವ ಕಾರಣಗಳಿಂದ ಶೋಷಣೆ ಮತ್ತು ಕ್ಷೋಭೆಯ ಗದ್ದಲ ಏರ್ಪಟ್ಟಿದೆಯೋ ಆ ಎಲ್ಲಾ ಕಾರಣಗಳನ್ನೂ ಇಸ್ಲಾಮ್ ಅಳಿಸಿಬಿಡುತ್ತದೆ. ದೇವಭಯದ ಕೊರತೆ, ಲೌಕಿಕ ಮೋಹ, ಮಾನವೀಯ ಹಕ್ಕುಗಳ ಬಗ್ಗೆ ಅಗೌರವ ಮತ್ತು ಅಕ್ರಮಕಾನೂನು ಮುಂತಾದವುಗಳೇ ಅದರ ಮೂಲ ಕಾರಣಗಳಾಗಿವೆ. ಇಸ್ಲಾಮ್ ಪ್ರತಿಯೊಬ್ಬ ವ್ಯಕ್ತಿಯ

ಹೃದಯದಲ್ಲೂ ದೇವಭಯವನ್ನು ಮೂಡಿಸುತ್ತದೆ.

ದೇವನು ಮಾನವನ ಸಮಸ್ತ ಚಲನವಲನಗಳನ್ನು ಬಲ್ಲವನಾಗಿದ್ದಾನೆ. ಮನಸ್ಸಿನಲ್ಲಿ ಮಾಡುವ ಸಂಕಲ್ಪವನ್ನೂ ಅವನು ಅರಿಯುತ್ತಾನೆ. ಮರಣದ ನಂತರ ನಮಗೆ ಅವನ ಕಡೆಗೇ ಹೋಗಬೇಕಾಗಿದೆ. ನಮ್ಮ ಪ್ರತಿಯೊಂದು ಮಾತು ಕೃತಿಗೆ ಅವನ ಮುಂದೆ ಲೆಕ್ಕ ಸಮರ್ಪಿಸಬೇಕಾಗಿದೆ. ಅವನು ನಮ್ಮ ದುಷ್ಕಾರ್ಯಗಳಿಗೆ ಅತ್ಯುಗ್ರ ದಂಡನೆಯನ್ನು ನೀಡುತ್ತಾನೆ. ಅವನ ಹಿಡಿತ ಅತ್ಯಂತ ಪ್ರಬಲವಾಗಿದೆ. ಅವನು ಕೆಲವೊಮ್ಮೆ ಭೂಮುಖದಲ್ಲೂ ಯಾತನೆಯನ್ನು ಎರಗಿಸುತ್ತಾನೆ. ವ್ಯಕ್ತಿ ಮತ್ತು ಸಮುದಾಯಗಳನ್ನು ಅವನು ನಾಶ ಮಾಡುತ್ತಾನೆ. ಯಾವ ಲೌಕಿಕ ಹಿತಾಸಕ್ತಿಗಳಿಗಾಗಿ ಮಾನವ ಇತರರ ಮೇಲೆ ಅಕ್ರಮವೆಸಗುತ್ತಾನೋ, ಪರಲೋಕದ ಅನುಗ್ರಹಗಳಿಗೆ ಹೋಲಿಸಿದರೆ ಅದಕ್ಕೆ ಕಿಂಚಿತ್ತೂ ಬೆಲೆಯಿಲ್ಲ. ಪರಲೋಕದ ಜೀವನ ಶಾಶ್ವತ ಜೀವನವಾಗಿದೆ. ಅಲ್ಲಿನ ಅನುಗ್ರಹಗಳು ನಿಸ್ಸೀಮ ಮತ್ತು ಶಾಶ್ವತವಾಗಿದೆ. ಅಲ್ಲಿನ ಯಾತನೆಯೂ ಅತ್ಯಂತ ಕಠೋರ ಮತ್ತು ಸ್ಥಿರವಾಗಿದೆ. ದೇವನ ದಾಸ್ಯ ಕೈಗೊಳ್ಳುವವರು ಮತ್ತು ದೇವನ ದಾಸರ ಹಕ್ಕುಗಳ ಪಾಲನೆ ಮಾಡುವವರು ಪರಲೋಕದ ಚಿರಂತನ ಜೀವನದಲ್ಲಿ ಸ್ವರ್ಗದ ಅಪಾರ ಮತ್ತು ಶಾಶ್ವತ-ಅನುಗ್ರಹಗಳಿಗೆ ಬಾಧ್ಯಸ್ಥರಾಗುತ್ತಾರೆ. ದೇವನ ಆಜ್ಞೋಲ್ಲಂಘನೆ ಮತ್ತು ಮಾನವರ ಮೇಲೆ ಅಕ್ರಮ ವೆಸಗುವವರು ಪರಲೋಕದಲ್ಲಿ ದೇವನ ಕಠಿಣ ಶಿಕ್ಷೆಗೆ ಈಡಾಗುತ್ತಾರೆ.

ದೇವನ ಹಕ್ಕುಗಳು ಮತ್ತು ದೇವನ ದಾಸರ ಹಕ್ಕುಗಳು ಇವು ಇಸ್ಲಾಮೀ ವ್ಯವಸ್ಥೆಯ ಎರಡು ಮೂಲಭೂತ ಭಾಗಗಳಾಗಿವೆ. ದೇವನ ದಾಸರ ಹಕ್ಕುಗಳಿಗೆ ದೇವನ ಹಕ್ಕುಗಳಿಗಿಂತ ಕಡಿಮೆ ಪ್ರಾಧಾನ್ಯತೆಯನ್ನು ಕಲ್ಪಿಸಲಾಗಿಲ್ಲ. ದೇವನು ಸ್ವತಃ ಕೆಲವು ಸ್ತರಗಳಲ್ಲಿ ತನ್ನ ಹಕ್ಕುಗಳಿಗಿಂತ ತನ್ನ ದಾಸರ ಹಕ್ಕುಗಳಿಗೆ ಮಹತ್ವ ಕಲ್ಪಿಸಿದ್ದಾನೆ. ಅಲ್ಲಾಹನು ಬಹುದೇವರಾಧನೆ ಮತ್ತು ದೇವಧಿಕ್ಕಾರಗಳ ಹೊರತು ತನ್ನ ಹಕ್ಕುಗಳಿಗೆ ಸಂಬಂಧಿಸಿದಂತೆ ಮಾಡಲಾದ ಚ್ಯುತಿಯನ್ನು ತಾನಿಚ್ಛಿಸಿದರೆ ಕ್ಷಮಿಸುತ್ತಾನೆ. ಆದರೆ ಮಾನವರ ಹಕ್ಕುಗಳಲ್ಲಿ ಮಾಡಲಾದ ಚ್ಯುತಿಯನ್ನು ಸ್ವತಃ ಆ ವ್ಯಕ್ತಿ ಕ್ಷಮಿಸುವ ತನಕ, ಅವನೆಂದೂ ಕ್ಷಮಿಸುವುದಿಲ್ಲ. ದೇವನ ಮಾರ್ಗದಲ್ಲಿ ಹುತಾತ್ಮವಾದರೂ ಮಾನವರ ಹಕ್ಕುಗಳು ಕ್ಷಮಿಸಲ್ಪಡುವುದಿಲ್ಲ. ಯಾರಾದರೂ ಮಾನವರ ಹಕ್ಕುಚ್ಯುತಿ ಮಾಡಿದ್ದರೆ ಪರಲೋಕದಲ್ಲಿ ಅವನ ಒಳಿತುಗಳನ್ನು ಅವನಿಂದ ಶೋಷಿಸಲ್ಪಟ್ಟವರಿಗೆ ನೀಡಲಾಗುವುದು ಮತ್ತು ಶೋಷಿತರ ಪಾಪಗಳನ್ನು ಅವನ ಮೇಲೆ ಹೊರಿಸಲಾಗುವುದು. ಅನಂತರ ಅತ್ಯಂತ ನಿಂದ್ಯ ಮತ್ತು ನೀಚನಾಗಿರುವ ಸ್ಥಿತಿಯಲ್ಲಿ ಅವನನ್ನು ನರಕಕ್ಕೆ ಹಾಕಲಾಗುವುದು.

ಮಾನವನು ನಿರ್ಮಿಸಿರುವ ಶೋಷಿತ ನಿಯಮಗಳಿಗೆ ಪ್ರತಿಯಾಗಿ ಇಸ್ಲಾಮ್ ದೇವನು ಕಳುಹಿಸಿರುವ ನ್ಯಾಯೋಚಿತ ವ್ಯವಸ್ಥೆಯನ್ನು ಮಾನವರಿಗೆ ನೀಡುತ್ತದೆ. ತಮ್ಮ ಪ್ರಾಣ ಮತ್ತು ಸಂಪತ್ತನ್ನು ಪಣಕ್ಕಿಟ್ಟು ಈ ವ್ಯವಸ್ಥೆಯನ್ನು ಪ್ರಬಲಗೊಳಿಸುವಂತೆ ಮತ್ತು ಜಾರಿಗೊಳಿಸುವಂತೆ

ಇದು ತನ್ನ ಅನುಯಾಯಿಗಳಿಗೆ ಆದೇಶಿಸುತ್ತದೆ. ಜಗತ್ತು ಅನ್ಯಾಯ ಮತ್ತು ಅಕ್ರಮಗಳಿಂದ ಮುಕ್ತವಾಗಿ ನ್ಯಾಯ-ನೀತಿ, ಜನಹಿತ ಮತ್ತು ಕಲ್ಯಾಣಕ್ಕೆ ಪಾತ್ರವಾಗಬೇಕೆಂಬುದೇ ಇದರ ಉದ್ದೇಶ.

ನ್ಯಾಯ-ನೀತಿಯ ಸ್ಥಾಪನೆಗಾಗಿ ಎಲ್ಲರೂ ಅಣಿಯಾಗಬೇಕಾಗಿದೆ. ಈ ನಿಟ್ಟಿನಲ್ಲಿ ವೈಯಕ್ತಿಕ, ಕೌಟುಂಬಿಕ ಮತ್ತು ಜನಾಂಗೀಯ ಹಿತಾಸಕ್ತಿಯನ್ನು ಪರಿಗಣಿಸಬಾರದು. ಇಸ್ಲಾಮಿನ ಪ್ರಕಾರ ಇದು ವೈಯಕ್ತಿಕವಾಗಿ ಪ್ರತಿಯೊಬ್ಬ ಮುಸಲ್ಮಾನನ ಬಾಧ್ಯತೆಯಾಗಿದೆ. ಅಂತೆಯೇ ಸಾಮಾಜಿಕವಾಗಿ ಇಸ್ಲಾಮೀ ರಾಷ್ಟ್ರ ಮತ್ತು ಮುಸ್ಲಿಮ್ ಸಮಾಜದ ಮೂಲಭೂತ ಹೊಣೆಗಾರಿಕೆಯಾಗಿದೆ.

"ಓ ಸತ್ಯವಿಶ್ವಾಸಿಗಳೇ! ನೀವು ನ್ಯಾಯದ ಧ್ವಜವಾಹಕರೂ ಅಲ್ಲಾಹನಿಗಾಗಿ ಸಾಕ್ಷ್ಯವಹಿಸುವವರೂ ಆಗಿರಿ. ನಿಮ್ಮ ನ್ಯಾಯ ಮತ್ತು ಸಾಕ್ಷ್ಯವು ಸ್ವತಃ ನಿಮ್ಮ ಅಥವಾ ನಿಮ್ಮ ಮಾತಾಪಿತರ ಮತ್ತು ಸಂಬಂಧಿಕರ ವಿರುದ್ಧವಾಗಿದ್ದರೂ ಸರಿಯೇ."

(ಪವಿತ್ರ ಕುರ್‌ಆನ್ - 4: 135)

## 4. ಒಳಿತುಗಳ ಸ್ಥಾಪನೆ ಮತ್ತು ಕೆಡುಕುಗಳ ನಿವಾರಣೆ

ಸತ್ಯಸಂಧತೆ, ಪ್ರಾಮಾಣಿಕತೆ, ವಚನಪಾಲನೆ, ಲಜ್ಜೆ, ನ್ಯಾಯ, ಕರುಣೆ, ಪ್ರೀತಿ, ವಾತ್ಸಲ್ಯ, ಸದ್ವರ್ತನೆ, ಔದಾರ್ಯ, ಅಂತರಂಗ-ಬಹಿರಂಗಗಳ ಸಮಾನತೆ, ಸಜ್ಜನಿಕೆ, ಉಪಕಾರ ಸ್ಮರಣೆ, ತಾಳ್ಮೆ ಮತ್ತು ಸ್ಥೈರಣೆ, ಕ್ಷಮೆ ಮುಂತಾದ ಪ್ರಶಂಸಾರ್ಹ ಗುಣಗಳ ಹೆಸರೇ ಮಾನವೀಯತೆ. ಯಾವ ವ್ಯಕ್ತಿಯಲ್ಲಿ ಈ ಗುಣಗಳಿರುವುದೋ ಅವನು ಮಾನವನೆನಿಸಿಕೊಳ್ಳಲು ಅರ್ಹನಾಗುವನು. ಅವನು ತನ್ನ ಕುಟುಂಬ, ಸಮಾಜ, ಸಮುದಾಯ ಮತ್ತು ವಿಶ್ವದ ಪಾಲಿಗೆ ಅನುಗ್ರಹವಾಗಿ ಪರಿಣಮಿಸುವನು. ಯಾವ ಸಮಾಜ ಈ ಗುಣಗಳಿಂದ ಸಂಪನ್ನವಾಗಿರುವುದೋ ಅದು ತಾನಿರುವ ರಾಷ್ಟ್ರ ಮತ್ತು ಸರ್ವ ಮಾನವ ಕುಲದ ಪಾಲಿಗೆ ಅನುಗ್ರಹವಾಗಿ ಪರಿಣಮಿಸುವುದು. ಮಾನವಕುಲ ಈ ಗುಣಗಳನ್ನು ತನ್ನದಾಗಿಸಿಕೊಂಡರೆ ವಿಶ್ವವು ಸ್ವರ್ಗವೆನಿಸಿಕೊಳ್ಳುವುದು. ಅನಂತರ ಮಾನವಕುಲದ ಯಾವ ಸಮಸ್ಯೆಯೂ ಬಗೆಹರಿಯದೆ ಉಳಿಯಲಾರದು.

ಇದಕ್ಕೆ ಪ್ರತಿಯಾಗಿ ಸುಳ್ಳು, ಅಪ್ರಾಮಾಣಿಕತೆ, ವಂಚನೆ, ವಚನಭಂಗ, ನಿರ್ಲಜ್ಜೆ, ಅಕ್ರಮ, ನಿಷ್ಕರುಣೆ, ಜಿಪುಣತನ, ಕೃತಘ್ನತೆ, ದುರಾಸೆ, ಸಂಕುಚಿತತೆ, ಈರ್ಷ್ಯೆ ಮತ್ತು ಅಸೂಯೆ, ಕಾಪಟ್ಯ, ಪ್ರತೀಕಾರ ಮುಂತಾದವುಗಳು ಅತ್ಯಂತ ನಿಂದ್ಯ ಗುಣಗಳಾಗಿವೆ. ಈ ದುರ್ಗುಣಗಳನ್ನು ಹೊಂದಿರುವ ವ್ಯಕ್ತಿ ಮಾನವನಾಗಿಯೂ ಪ್ರಾಣಿಸದೃಶನಾಗಿರುವನು. ಅಂತಹವರನ್ನು ದಾನವ, ರಾಕ್ಷಸ ಅಥವಾ ಪಿಶಾಚಿಗೆ ಸಮಾನ ಎನ್ನಬಹುದು. ಅವರು ಮಾನವರ ಪಾಲಿಗೆ ಶಾಪವಾಗಿರುವರು. ಯಾವುದೇ ಸಮಾಜದಲ್ಲಿ ಈ ಗುಣಗಳು ವ್ಯಾಪಕವಾದರೆ

ಅದು ತನ್ನ ಸಮಾಜ, ರಾಷ್ಟ್ರ ಮತ್ತು ವಿಶ್ವದ ಪಾಲಿಗೆ ಮಾರಕವೆನಿಸುವುದು. ಮಾನವಕುಲದ ಈ ಗುಣಗಳು ವ್ಯಾಪಕವಾದರೆ ಲೋಕದ ಎಲ್ಲೆಡೆ ಕ್ಷೋಭೆ, ಗೊಂದಲ ಮತ್ತು ಕೋ ಸುಲಿಗೆ ವ್ಯಾಪಕವಾಗಿ ಪರಿಣಮಿಸುವುದು. ಮಾನವ ಕುಲದಲ್ಲಿ ಅಸಂಖ್ಯಾತ ಬಿಕ್ಕಟ್ಟುಗ ಜನ್ಮತಾಳುವುದು ಮತ್ತು ಈ ವಿಶ್ವ ವಸ್ತುತಃ ನರಕಸದೃಶವಾಗಿ ಮಾರ್ಪಡುವುದು. ಯಾವು ಭೌತಿಕ ಪ್ರಗತಿ ಲೋಕವನ್ನು ಈ ಸ್ಥಿತಿಯಿಂದ ಮುಕ್ತಗೊಳಿಸಲಾರದು. ಅದಕ್ಕೆ ಪ್ರತಿಯಾ ಅದರಿಂದ ವಿನಾಶದ ಗತಿ ಇನ್ನಷ್ಟೂ ತೀವ್ರವಾದೀತು. ಹಿಂದೆ ಮಾನವ ಶೋಷ ಮಾಡಬಯಸಿದರೆ ಬಡಿಗೆ ಮತ್ತು ಖಡ್ಗದಿಂದ ಆಕ್ರಮಣ ನಡೆಸುತ್ತಿದ್ದ. ಆದರೆ ಈಗ ಅವ ತೋಪು, ಟ್ಯಾಂಕು, ಬಾಂಬು ಮತ್ತು ಕ್ಷಿಪಣಿಗಳಿಂದ ಸಜ್ಜಿತನಾಗಿದ್ದಾನೆ. ಅಣುಬಾಂಬ ಮತ್ತು ಹೈಡ್ರೋಜನ್ ಬಾಂಬ್ ಸಮಸ್ತ ಜಗತ್ತನ್ನೇ ನಾಶಪಡಿಸಬಲ್ಲುದು. ಮೊದಲು ನಾಲ ಮತ್ತು ಲೇಖನಿಯ ಶಕ್ತಿಯ ಮೂಲಕ ಮಾತ್ರವೇ ಮಾನವ ಜನರನ್ನು ದಾರಿತಪ್ಪಿಸುತ್ತಿದ್ದ ಆದರೆ ಈಗ ಮಾಧ್ಯಮ, ಪತ್ರಿಕೆ, ರೇಡಿಯೋ, ಟಿ.ವಿ. ಮುಂತಾದ ಅತ್ಯಂತ ಪ್ರಭಾವಶಾ ಮಾಧ್ಯಮಗಳು ಅವನ ಬಳಿ ಇವೆ. ಈ ಮಾಧ್ಯಮಗಳ ಮೂಲಕ ಕೆಲವು ಕ್ಷಣಗಳಲ್ಲಿ ಕೋಟಿಗಟ್ಟಲೆ ಮಾನವರನ್ನು ತಪ್ಪುದಾರಿಗೆಳೆಯಬಹುದು, ಉದ್ರೇಕಿಸಬಹುದು ಅಥವ ಅವರನ್ನು ನಿರ್ಲಜ್ಜರು ಮತ್ತು ದುಷ್ಕರ್ಮಿಗಳಾಗಿ ಮಾರ್ಪಡಿಸಬಹುದು.

ಇಂದು ಲೋಕವು ಸ್ತುತ್ಯ ಗುಣಗಳಿಂದ ಮುಕ್ತವಾಗಿರುವುದು ಮತ್ತು ನಿಂದ್ಯ ಗುಣಗಳ ಹಾಗೂ ಕೆಡುಕುಗಳು ಮಹಾ ಮಾರಿಯಂತೆ ವ್ಯಾಪಿಸಿರುವುದು ಮಾನವಕುಲದ ಅತಿ ದೊಡ್ಡ ದುರಂತವಾಗಿದೆ. ಈ ಕಾರಣದಿಂದ ಒಬ್ಬ ವ್ಯಕ್ತಿ ಇತರ ವ್ಯಕ್ತಿಗಳ ಪಾಲಿಗೆ, ಒಂದು ಸಮಾಜ ಇತರ ಸಮಾಜಗಳ ಪಾಲಿಗೆ, ಒಂದು ರಾಷ್ಟ್ರ-ಇತರ ರಾಷ್ಟ್ರಗಳ ಪಾಲಿಗೆ ಕ್ಷೋಭೆಯನ್ನುಂಟು ಮಾಡುತ್ತಿವೆ. ಸಮಸ್ತ ಜಗತ್ತು ನರಕಸದೃಶವಾಗಿದೆ.

ಪಾಶ್ಚಿಮಾತ್ಯ ಚಿಂತನೆ ಮತ್ತು ಸಿದ್ಧಾಂತಗಳ ಪ್ರಾಬಲ್ಯವು ಇದರ ಕಾರಣಗಳಲ್ಲೊಂದಾಗಿದೆ. ಪಾಶ್ಚಿಮಾತ್ಯ ಸಿದ್ಧಾಂತದ ಪ್ರಕಾರ- "ನೈತಿಕ ಮೌಲ್ಯಗಳು ತುಚ್ಛ ಮತ್ತು ದುರ್ಬಲವಾಗಿದೆ. ಮಾನವನು ತನಗೆ ಲಾಭ ವಿರುವ ಕೆಲಸವನ್ನು ಮಾತ್ರ ಮಾಡಬೇಕು. ವ್ಯಕ್ತಿ ಅವನಿಗೆ ರುಚಿಸುವ ಮತ್ತು ರೋಚಕವೆನಿಸುವ ಎಲ್ಲಾ ಕೆಲಸಗಳನ್ನೂ ಮಾಡಬೇಕು."

ವ್ಯಕ್ತಿ ದೇವನಿಂದ ವಿಮುಖನಾಗಿರುವುದು ಮತ್ತು ಧರ್ಮದಿಂದ ದೂರ ಸರಿದಿರುವುದು ಇದರ ಮತ್ತೊಂದು ಕಾರಣವಾಗಿದೆ. ದೇವಭಯ ಮಾನವನನ್ನು ಕೆಡುಕುಗಳಿಂದ ತಡೆಯುತ್ತದೆ. ದೇವ ಸಂಪ್ರೀತಿ ಮತ್ತು ಪುಣ್ಯಾಕಾಂಕ್ಷೆ ಅವನನ್ನು ನಿರಂತರ ಸನ್ಮಾರ್ಗದಲ್ಲಿ ನಡೆಯಲು ಪ್ರೇರೇಪಿಸುತ್ತದೆ. ಧಾರ್ಮಿಕ ಬೋಧನೆಗಳು ನೈತಿಕ ತತ್ವಗಳಿಗೆ ಪ್ರಾಥಮಿಕ ಪ್ರಾಶಸ್ತ್ಯ ಕೊಡುತ್ತದೆ. ಧಾರ್ಮಿಕ ನೇತಾರರ ಉನ್ನತ ಚಾರಿತ್ರ್ಯ ಮತ್ತು ಸಮಾಜದ ಸುಧಾರಣೆಯ ನಿಟ್ಟಿನಲ್ಲಿ ಅವರ ನಿರಂತರ ಪರಿಶ್ರಮ ಸಮಾಜವನ್ನು ನೈತಿಕತೆಯಲ್ಲಿ ನೆಲೆ ನಿಲ್ಲುವಂತೆ ಮಾಡುತ್ತದೆ. ಧರ್ಮ ಮತ್ತು ದೇವಾನುಸರಣೆಯಿಂದ ದೂರಸರಿಯುವ ಮೂಲಕ ಇಂದು

ತೀರಾ ಭಿನ್ನವಾದ ಪರಿಸ್ಥಿತಿ ನಿರ್ಮಾಣಗೊಂಡಿದೆ. ಮಾನವ ಸ್ವೇಚ್ಛಾ ವೃತ್ತಿಯ ಗುಲಾಮನಾಗಿ ಪಿಶಾಚಿಯ ವಶಕ್ಕೆ ಬಲಿಯಾಗಿದ್ದಾನೆ.

ಮೂರನೆಯ ಕಾರಣ ಸಾಮಾಜಿಕ ಜೀವನಕ್ಕೂ ಸರ್ಕಾರದ ಧರ್ಮ ಮತ್ತು ನೀತಿಗೂ ಯಾವುದೇ ಸಂಬಂಧ ವಿಲ್ಲವೆಂಬ ದೃಷ್ಟಿಕೋನವಾಗಿದೆ. ಸರ್ಕಾರದ ಪ್ರಭಾವ ಇಂದು ಜೀವನದ ಎಲ್ಲಾ ರಂಗಗಳಿಗೆ ವ್ಯಾಪಿಸಿದೆ. ಇನ್ನು ಅನೀತಿವಂತರು, ಚಾರಿತ್ರ್ಯಹೀನರು ಮತ್ತು ದೇವವಿಸ್ಮೃತಿಗೆ ಈಡಾದವರ ಕೈಯಲ್ಲಿ ಇಂದು ಅಧಿಕಾರವಿದೆ. ಪರಿಣಾಮವಾಗಿ ಸಮಸ್ತ ಲೋಕವಿಂದು ನೈತಿಕ ಕ್ಷೋಭೆ ಮತ್ತು ಪರಿಹಾರ ಕಾಣದ ಸಮಸ್ಯೆಗಳ ಸುಳಿಯಲ್ಲಿ ಸಿಲುಕಿದೆ.

ಇದು ಮಾನವನ ಮುಂದಿರುವ ಮೂಲಭೂತ ಸಮಸ್ಯೆಯಾಗಿದೆ. ಈ ಗಂಭೀರ ಸಮಸ್ಯೆಯನ್ನು ಪರಿಹರಿಸುವ ವ್ಯವಸ್ಥೆ ಮಾತ್ರವೇ ಅನುಗ್ರಹಪ್ರದ ವ್ಯವಸ್ಥೆಯೆನಿಸಿಕೊಳ್ಳುವುದು. ವ್ಯಕ್ತಿ ಮತ್ತು ಸಮಾಜವನ್ನು ಮಾತ್ರವಲ್ಲ, ಜಗತ್ತಿನ ಸಮಸ್ತ ರಾಷ್ಟ್ರಗಳನ್ನು ಸಚ್ಚಾರಿತ್ರ್ಯಕ್ಕೆ ಬದ್ಧಗೊಳಿಸುವ, ಸಾಮ್ರಾಜ್ಯದ ಕರಗಳಿಗೆ ಸಚ್ಚಾರಿತ್ರ್ಯದ ಕೈಕೋಳ ತೊಡಿಸುವ ವ್ಯವಸ್ಥೆಯೇ ಆ ವ್ಯವಸ್ಥೆ. ಮಾನವಕೃತ ವ್ಯವಸ್ಥೆಗಳಿಂದ ಈ ಉದ್ದೇಶವನ್ನು ಸಾಧಿಸಲು ಸಾಧ್ಯವಿಲ್ಲ. ಮಾನವಕೃತ ವ್ಯವಸ್ಥೆಗಳ ಬಳಿ ಸಚ್ಚಾರಿತ್ರ್ಯದ ಸ್ಥಾಪನೆಗೆ ಯಾವುದೇ ಸ್ಥಾನವಾಗಲೀ ಕಾರ್ಯಕ್ರಮಗಳಾಗಲೀ ಇಲ್ಲ. ಅವು ಸಾಮಾಜಿಕ ಜೀವನವನ್ನು ಧರ್ಮ ಮತ್ತು ನೀತಿಯಿಂದ ದೂರವಿರಿಸ ಬಯಸುತ್ತವೆ. ಧರ್ಮಗಳೂ ಈ ನಿಟ್ಟಿನಲ್ಲಿ ಪ್ರಯೋಜನಕ್ಕೆ ಬರಲಾರದು. ಏಕೆಂದರೆ ಅವು ನೀತಿಗೆ ಒತ್ತು ಕೊಡುವುದರ ಜತೆಗೆ ಲೋಕವಿರಕ್ತಿ ಮತ್ತು ನಾಗರಿಕತೆಯಿಂದ ದೂರವಿರುವ ಕರೆ ಕೊಡುತ್ತದೆ. ಸುಸಂಸ್ಕೃತ ಜಗತ್ತನ್ನು ಸೃಷ್ಟಿಸಲು ಆ ಧರ್ಮಗಳಿಗೆ ಸಾಧ್ಯವಿಲ್ಲ. ನೈತಿಕ ಮೌಲ್ಯಗಳಲ್ಲಿ ಅಧಿಷ್ಠಿತವಾಗಿರುವುದರ ಜತೆಗೆ ಜೀವನದ ಸಮಸ್ಯೆಗಳಿಗೆ ಪರಿಹಾರವನ್ನೂ ಆ ಧರ್ಮಗಳು ನೀಡಲಾರದು.

ಆದರೆ ಇಸ್ಲಾಮೀ ವ್ಯವಸ್ಥೆಯು ಆ ಎಲ್ಲ ಕಲ್ಪನೆಗಳಿಗಿಂತ ಭಿನ್ನವಾಗಿದೆ. ಅದು ಸಮಸ್ತ ವೈಯಕ್ತಿಕ ಮತ್ತು ಸಾಮೂಹಿಕ ಜೀವನವನ್ನು ನೈತಿಕ ನಿಯಮಗಳಿಗೆ ಬದ್ಧಗೊಳಿಸುತ್ತದೆ. ನೈತಿಕ ತತ್ವಗಳ ಆಧಾರದಲ್ಲಿ ಜೀವನದ ಸಮಗ್ರ ವ್ಯವಸ್ಥೆಯನ್ನು ಸಮರ್ಪಿಸುತ್ತದೆ. ದೇವವಿಶ್ವಾಸ, ದೇವಭಯ, ದೇವಸಂಪ್ರೀತಿ, ದೇವನ ನಿಸ್ಸೀಮ ಪುಣ್ಯದ ನಿರೀಕ್ಷೆ, ಅವನ ಕಠೋರ ಶಿಕ್ಷೆಯ ಬಗ್ಗೆ ಎಚ್ಚರಿಕೆ ಇತ್ಯಾದಿ ಪ್ರಬಲ ಪ್ರೇರಕಗಳನ್ನು ಅದು ನೈತಿಕತೆಗೆ ಒದಗಿಸುತ್ತದೆ. ಇಹ ಮತ್ತು ಪರಲೋಕದ ವಿಜಯಕ್ಕೆ ಸತ್ಯವಿಶ್ವಾಸ ಮಾತ್ರ ಸಾಕಾಗದು, ಬದಲಾಗಿ ಸತ್ಕರ್ಮ ಹಾಗೂ ಸತ್ಯ, ಸಹನೆ ಮತ್ತು ಸುದೃಢತೆಯ ಬೋಧನೆಯೂ ಅತ್ಯಗತ್ಯವಾಗಿದೆ ಎಂದು ಅದು ಸ್ಪಷ್ಟ ಪಡಿಸುತ್ತದೆ- "ಕಾಲದಾಣೆ! ನಿಶ್ಚಯವಾಗಿಯೂ ಮನುಷ್ಯನು ನಷ್ಟದಲ್ಲಿದ್ದಾನೆ. ಸತ್ಯವಿಶ್ವಾಸ ಕೈಗೊಂಡು ಪರಸ್ಪರ ಸತ್ಯವನ್ನೂ ಸಹನೆಯನ್ನೂ ಉಪದೇಶಿಸುತ್ತಿರುವವರ ಹೊರತು." (ಪವಿತ್ರ ಕುರ್‌ಆನ್: ಅಧ್ಯಾಯ - 103)

ಒಳಿತಿನ ಆದೇಶ ಕೊಡುವುದು ಮತ್ತು ಕೆಡುಕಿನಿಂದ ತಡೆಯುವುದು ಪ್ರತಿಯೋರ್ವ ಮುಸಲ್ಮಾನನ ಮತ್ತು ಸಮಸ್ತ ಮುಸ್ಲಿಮ್ ಸಮುದಾಯದ ಜೀವನೋದ್ದೇಶವೆಂದು ಇಸ್ಲಾಮ್ ಪರಿಗಣಿಸುತ್ತದೆ.

"ನೀವು ಮಾನವರಿಗಾಗಿ ನಿಯೋಜಿಸಲ್ಪಟ್ಟ ಅತ್ಯುತ್ತಮ ಸಮುದಾಯವಾಗಿದ್ದೀರಿ. ಒಳಿತಿನ ಆದೇಶ ಕೊಡುತ್ತೀರಿ, ಕೆಡುಕಿನಿಂದ ತಡೆಯುತ್ತೀರಿ ಮತ್ತು ಅಲ್ಲಾಹನ ಮೇಲೆ ವಿಶ್ವಾಸ ವಿರಿಸುತ್ತೀರಿ." (ಪವಿತ್ರ ಕುರ್‌ಆನ್- 3: 110)

ಅಲ್ಲಾಹನ ದಾಸ್ಯದ ಸ್ಥಾಪನೆ, ಮಾನವೀಯ ಹಕ್ಕುಗಳನ್ನು ಒದಗಿಸುವುದು ಹಾಗೂ ಒಳಿತಿನ ಸಂಸ್ಥಾಪನೆ ಮತ್ತು ಕೆಡುಕಿನ ನಿವಾರಣೆಯ ವ್ಯವಸ್ಥೆ ಮಾಡುವುದು ಇಸ್ಲಾಮಿ ಸಾಮ್ರಾಜ್ಯದ ಮೂಲಭೂತ ಉದ್ದೇಶವೆಂದು ಅದು ಸಾರುತ್ತದೆ.

"ಅವರು ಎಂಥವರೆಂದರೆ- ಇವರಿಗೆ ನಾವು ಭೂಮಿಯಲ್ಲಿ ಅಧಿಕಾರ ಪ್ರದಾನ ಮಾಡಿದರೆ ಅವರು ನಮಾಝ್ ಸಂಸ್ಥಾಪಿಸುತ್ತಾರೆ, ಝಕಾತ್ ಕೊಡುತ್ತಾರೆ ಮತ್ತು ಒಳಿತಿನ ಆದೇಶ ಕೊಡುತ್ತಾರೆ ಹಾಗೂ ಕೆಡುಕಿನಿಂದ ತಡೆಯುತ್ತಾರೆ." (ಪವಿತ್ರ ಕುರ್‌ಆನ್- 22: 41)

## 5. ಸರ್ವಾಂಗೀಣ ಪ್ರಗತಿ

ಮಾನವನು ಬುದ್ಧಿ ಮತ್ತು ವಿವೇಕವನ್ನು ಹೊಂದಿರುವವನಾಗಿದ್ದಾನೆ. ಪ್ರಾಯೋಗಿಕ ಮತ್ತು ವೈಚಾರಿಕ ಪ್ರಗತಿ ಅವನ ಮೂಲಭೂತ ಅವಶ್ಯಕತೆಗಳಲ್ಲೊಂದಾಗಿದೆ. ಅವನು ಆತ್ಮವನ್ನೂ ಹೊಂದಿದ್ದಾನೆ. ಆದ್ದರಿಂದ ಆಧ್ಯಾತ್ಮಿಕ ಪ್ರಗತಿಯೂ ಅವನಿಗೆ ಅತ್ಯವಶ್ಯಕವಾಗಿದೆ. ಅವನು ನೈತಿಕ ಅಸ್ತಿತ್ವವನ್ನೂ ಹೊಂದಿದ್ದಾನೆ. ತನ್ನಿಮಿತ್ತ ನೈತಿಕ ಪ್ರಗತಿಯೂ ಅವನಿಗೆ ಅವಶ್ಯಕವಾಗಿದೆ. ಅವನು ಭೌತಿಕ ಅಸ್ತಿತ್ವವನ್ನೂ ಹೊಂದಿದ್ದಾನೆ. ಆದ್ದರಿಂದ ಭೌತಿಕರಂಗದಲ್ಲೂ ಅವನು ಪ್ರಗತಿ ಸಾಧಿಸಬೇಕಾಗಿದೆ. ಅವನು ಸಮಾಜವನ್ನು ನಿರ್ಮಿಸುತ್ತಾನೆ ಮತ್ತು ಸಾಮಾಜಿಕ ಜೀವನ ಸಾಗಿಸುತ್ತಾನೆ. ಆದ್ದರಿಂದ ಅವನು ಸಾಮಾಜಿಕ ಪ್ರಗತಿಯನ್ನೂ ಸಾಧಿಸಬೇಕಾಗಿದೆ. ಅವನು ಸಂಪತ್ತನ್ನು ಸಂಪಾದಿಸುತ್ತಾನೆ ಮತ್ತು ವ್ಯಯಿಸುತ್ತಾನೆ. ಆದ್ದರಿಂದ ಆರ್ಥಿಕರಂಗದಲ್ಲೂ ಅವನು ಪ್ರಗತಿ ಸಾಧಿಸಬೇಕಾಗಿದೆ. ಅವನು ಸರಕಾರ ಮತ್ತು ಕಾನೂನಿನ ವಿನಾ ಸಾಮಾಜಿಕ ಜೀವನವನ್ನು ಸಾಗಿಸಲಾರ. ಆದ್ದರಿಂದ ರಾಜಕೀಯ ಪ್ರಗತಿಯೂ ಅವನ ಪಾಲಿಗೆ ಅತ್ಯವಶ್ಯಕವಾಗಿದೆ. ಅವನು ಹಲವು ಬಗೆಯ ಆಸಕ್ತಿಯನ್ನು ಹೊಂದಿದ್ದಾನೆ. ಈ ಆಸಕ್ತಿಗಳಿಗೆ ಸಂಬಂಧಿಸಿದಂತೆಯೂ ಅವನು ಪ್ರಗತಿ ಹೊಂದಬೇಕು. ಒಟ್ಟಿನಲ್ಲಿ ಮಾನವನಿಗೆ ಅವನ ಸರ್ವಾಂಗೀಣ ಪ್ರಗತಿ ಸಾಧ್ಯವಿರುವಂತಹ ವ್ಯವಸ್ಥೆಯೊಂದು ಅತ್ಯವಶ್ಯಕವಾಗಿದೆ. ಜೀವನದ ಎಲ್ಲ ಮಜಲುಗಳ ಪ್ರಗತಿಯನ್ನು ಖಾತ್ರಿ ಪಡಿಸುವ ಇಂತಹ ವ್ಯವಸ್ಥೆಯೊಂದು ಅಸ್ತಿತ್ವದಲ್ಲಿದೆಯೇ?

ವಿಜ್ಞಾನ ಮತ್ತು ತತ್ವಜ್ಞಾನ, ಶೈಕ್ಷಣಿಕ ಮತ್ತು ವೈಚಾರಿಕ ಪ್ರಗತಿಯ ಬಗ್ಗೆ ವಾದಿಸುತ್ತದೆ. ಆದರೆ ಜ್ಞಾನ ಮತ್ತು ವಿಶ್ವಾಸದ ಬದಲು ಗುಮಾನಿಯ ಸುಳಿಯಲ್ಲಿ ಅದು ಮಾನವನನ್ನು ದಾರಿತಪ್ಪಿಸಿ ಬಿಡುತ್ತದೆ. ಅಲ್ಲದೆ ವೈಚಾರಿಕ ಪ್ರಗತಿಯನ್ನು ಬಿಟ್ಟರೆ ಬೇರಾವುದೇ ವಿಧದ ಪ್ರಗತಿಯ ಬಗ್ಗೆ ಅದು ಚರ್ಚಿಸುವುದಿಲ್ಲ. ಇನ್ನು ಧರ್ಮಗಳ ಮಟ್ಟಿಗೆ ಹೇಳುವುದಾದರೆ ಅವು ಜ್ಞಾನ ಮತ್ತು ವಿಶ್ವಾಸದ ಬದಲು ಅದಕ್ಕೆ ತದ್ವಿರುದ್ಧವಾದ ಅಂಶಗಳಲ್ಲಿ ಕುರುಡು ನಂಬಿಕೆಯನ್ನಿಡಲು ಹೇಳುತ್ತವೆ. ಚಾತ್ಯತೀತ ವ್ಯವಸ್ಥೆಗಳು ಆಧ್ಯಾತ್ಮಿಕತೆ ಮತ್ತು ನೈತಿಕತೆಯಿಂದ ತಮ್ಮ ಸಂಬಂಧವನ್ನು ಕಡಿದುಕೊಂಡಿದೆ. ಅವು ಕೇವಲ ಆರ್ಥಿಕ ಅಥವಾ ರಾಜಕೀಯ ಪ್ರಗತಿಯ ಬಗ್ಗೆ ವಾದಿಸುತ್ತವೆ. ಧರ್ಮಗಳು ಆಧ್ಯಾತ್ಮಿಕತೆಯ ಬಗ್ಗೆ ಚರ್ಚಿಸುತ್ತದೆ ನಿಜ. ಆದರೆ ಆಧ್ಯಾತ್ಮಿಕತೆಯ ಹೆಸರಲ್ಲಿ ಅದು ಮಾನವನನ್ನು ಹೊರಬರಲಾರದಂತಹ ಅಂಧಕಾರದಲ್ಲಿ ಸಿಲುಕಿಸಿ ಬಿಡುತ್ತದೆ. ಅನಂತರ ಅವನು ನಾಗರಿಕ ಜಗತ್ತಿನಲ್ಲಿ ಯಾವುದೇ ಉಪಯೋಗಕ್ಕೆ ಬರಲಾರನು. ಹಾಗೆಯೇ ಈ ಧರ್ಮಗಳು ಅವನ ಭೌತಿಕ, ಆರ್ಥಿಕ ಮತ್ತು ರಾಜಕೀಯ ಪ್ರಗತಿಯಲ್ಲಿ ಅವನಿಗೆ ನೆರವಾಗಲಾರವು. ಎಲ್ಲಾ ಧರ್ಮಗಳು ಮತ್ತು ವ್ಯವಸ್ಥೆಗಳ ಸ್ಥಿತಿ ಇದುವೇ ಆಗಿದೆ. ಅವು ಕೆಲವು ವಿಷಯಗಳಿಗೆ ಸಂಬಂಧಿಸಿದಂತೆ ವ್ಯಕ್ತಿಗಳ ಮತ್ತು ರಾಷ್ಟ್ರಗಳ ಪ್ರಗತಿಯ ಬಗ್ಗೆ ವಾದಿಸುತ್ತದೆ. ಆದರೆ ಸರ್ವಾಂಗೀಣ ಪ್ರಗತಿಗೆ ಬೇಕಾದಂತಹ ತಗಾದೆಗಳು ಅಲ್ಲಿ ಕಂಡು ಬರುವುದಿಲ್ಲ.

ಇಸ್ಲಾಮ್ ಮಾನವನ ಸರ್ವಾಂಗೀಣ ಪ್ರಗತಿಯ ಭರವಸೆ ನೀಡುತ್ತದೆ. ಅದೂ ಒಂದು ಧರ್ಮವಾಗಿದೆ ನಿಜ. ಆದರೆ ಅದು ಜ್ಞಾನ ಮತ್ತು ಸಂಶೋಧನೆಯ ಆಧಾರದಲ್ಲಿ ಮಾನವಕುಲದ ವೈಚಾರಿಕ ವಿಕಾಸ ಮಾಡುತ್ತದೆ. ಇಂದಿನ ವೈಜ್ಞಾನಿಕ ಯುಗದಲ್ಲಿ ಅದು ಮಾನವನಿಗೆ ವೈಜ್ಞಾನಿಕ ಮತ್ತು ವೈಚಾರಿಕ ಮಾರ್ಗದರ್ಶನ ಮಾಡುವ ಅರ್ಹತೆಯನ್ನು ಹೊಂದಿದೆ. ಅದು ದೇವನೊಂದಿಗೆ ನೈಜ ಸಂಬಂಧವನ್ನು ಸ್ಥಾಪಿಸಿ ಮಾನವನ ಆಧ್ಯಾತ್ಮಿಕ ಪ್ರಗತಿಯನ್ನೂ ಗಳಿಸಿ ಕೊಡುತ್ತದೆ. ಅದು ವ್ಯಕ್ತಿ, ಸಮಾಜ ಮತ್ತು ರಾಷ್ಟ್ರವನ್ನು ನೈತಿಕತೆಗೆ ಬದ್ಧಗೊಳಿಸುತ್ತದೆ. ಅದಲ್ಲದೆ ಅವನ ಸಾಮಾಜಿಕ, ಆರ್ಥಿಕ, ರಾಜಕೀಯ ಪ್ರಗತಿಯನ್ನೂ ಅದು ಸಾಧಿಸುತ್ತದೆ. ಅವನ ಆಸಕ್ತಿಗಳ ವಿಕಸನಕ್ಕೂ ಅದು ಆಸ್ಪದ ಮಾಡಿಕೊಡುತ್ತದೆ. ಇಸ್ಲಾಮಿನ ಹೊರತು ಯಾವುದೇ ವ್ಯವಸ್ಥೆ ಅಥವಾ ಧರ್ಮಕ್ಕೆ ಈ ವಿಶೇಷತೆ ಲಭ್ಯವಿಲ್ಲ.

## 6. ಸಕಲ ಮಾನವರ ಸಮಸ್ತ ಸಮಸ್ಯೆಗಳಿಗೆ ಪರಿಹಾರ

ಭೌತಿಕ ಪ್ರಗತಿಯ ಮಟ್ಟಿಗೆ ಹೇಳುವುದಾದರೆ, ಇಂದು ಮಾನವನಿಗೆ ಲಭ್ಯವಿರುವ ಮಾಧ್ಯಮಗಳು, ಸೌಕರ್ಯಗಳು ಮತ್ತು ಸಾಧನಾನುಕೂಲತೆಗಳು ಹಿಂದೆ ಅವನಿಗೆ ಕನಸಿನಲ್ಲೂ ಕಲ್ಪಿಸಲು ಸಾಧ್ಯವಿರಲಿಲ್ಲ. ಆದರ ಹೊರತಾಗಿಯೂ ಇಂದು ಪ್ರತಿಯೊಬ್ಬ ವ್ಯಕ್ತಿಯೂ ಅನೇಕ ರೀತಿಯ ಸಮಸ್ಯೆಗಳ ಸುಳಿಯಲ್ಲಿ ಸಿಕ್ಕಿ ಹಾಕಿಕೊಂಡಿದ್ದಾನೆ. ಪ್ರತಿಯೊಂದು ವರ್ಗ, ಪಂಗಡ,

ವಿಭಾಗ ಮತ್ತು ರಾಷ್ಟ್ರಗಳು ಅಸಂಖ್ಯಾತ ಸಮಸ್ಯೆಗಳನ್ನು ಎದುರಿಸುತ್ತಿವೆ. ಸಮಸ್ಯೆಗಳ ಅಂಧಕಾರದಲ್ಲಿ ಸಮಸ್ತ ಮಾನವಕುಲ ಪರಿಹಾರೋಪಾಯ ಕಾಣದೆ ದಿಕ್ಕೆಟ್ಟಿರುವಂತೆ ಭಾಸವಾಗುತ್ತಿದೆ. ಜನರು, ಧರ್ಮನಿರಪೇಕ್ಷ ಪ್ರಜಾಸತ್ತೆಯು ಅವರ ಸಮಸ್ಯೆಗಳನ್ನು ಪರಿಹರಿಸುವುದು ಮತ್ತು ಅದರಿಂದಾಗಿ ಲೋಕ ಸ್ವರ್ಗ ಸಮಾನವಾಗುವುದೆಂದು ಭಾವಿಸಿದ್ದರು. ಆದರೆ ಪ್ರಜಾಸತ್ತೆ ಲೋಕಕ್ಕೆ ಕೊನೆಯಿಲ್ಲದ ಬಯಕೆಗಳನ್ನು, ಪರಸ್ಪರ ಸಂಘರ್ಷಿಸುವ ಹಿತಾಸಕ್ತಿಗಳನ್ನು, ಬಂಡವಾಳಶಾಹಿತ್ವದ ಶಾಪವನ್ನು, ರಾಷ್ಟ್ರೀಯತೆ ಆಧಾರಿತವಾದ ಯುದ್ಧಗಳನ್ನು ಮತ್ತು ವಿಸ್ತರಣಾವಾದವೇ ಮುಂತಾದ ಕೊಡುಗೆಗಳನ್ನು ನೀಡಿತು. ಅನಂತರ ಸಮತಾವಾದವು ಸಮಸ್ಯೆಗಳ ಪರಿಹಾರಕ್ಕೆ ಮುಂದಾಯಿತು. ಆದರೆ ಅದು ಮಾನವಕುಲವನ್ನು ಪ್ರಾಣಿಗಳ ಮಟ್ಟಕ್ಕೆ ತಲಪಿಸಿತು. ಅದು ಬಂಡವಾಳಶಾಹಿತ್ವ ಮತ್ತು ಅತ್ಯಂತ ಹೇಯವಾದ ಸರ್ವಾಧಿಕಾರಕ್ಕೆ ಜನ್ಮಕೊಟ್ಟಿತು. ಧರ್ಮ ಮತ್ತು ಚಾರಿತ್ರ್ಯದ ಜತೆಗೆ ಚಿಂತನೆ-ವರ್ತನೆ ಮತ್ತು ಅಭಿವ್ಯಕ್ತಿಯ ಸಕಲ ವಿಧ ಸ್ವಾತಂತ್ರ್ಯದಿಂದ ಮಾನವನಿಗೆ ಮುಕ್ತಿ ನೀಡಿತು. ತಮ್ಮದೇ ದೇಶದ ಜನಸಾಮಾನ್ಯರ ಮತ್ತು ಪ್ರಮುಖ ವ್ಯಕ್ತಿಗಳ ವಿರುದ್ಧ ವ್ಯಾಪಕ ಪ್ರಮಾಣದಲ್ಲಿ ಕೊಲೆ-ಸುಲಿಗೆಗಳನ್ನು ನಡೆಸಿತು. ಕೇಳಿದರೆ ಮೈನಡುಗಿಸುವಂತಹ ಘೋರ ಮತ್ತು ಭಯಾನಕ ಸ್ವರೂಪದ ಶಿಕ್ಷೆಗಳನ್ನು ಅವರಿಗೆ ನೀಡಲಾಯಿತು. ಇತರ ರಾಷ್ಟ್ರಗಳಲ್ಲಿ ಒಳಸಂಚು ಮತ್ತು ಯುದ್ಧಗಳ ಸರಮಾಲೆಯನ್ನೇ ಆರಂಭಿಸಿತು. ಅದರಿಂದ ಎಷ್ಟೋ ಸಾಮ್ರಾಜ್ಯಗಳು ನಲುಗಿಹೋದವು.

ಈ ಎರಡೂ ವ್ಯವಸ್ಥೆಗಳು ಸಮಸ್ಯೆಗಳನ್ನು ಪರಿಹರಿಸುವ ಬದಲಾಗಿ ಅದನ್ನು ಮತ್ತಷ್ಟು ರೂಕ್ಷಗೊಳಿಸಲು ಮಾತ್ರವೇ ಸಹಾಯಕವಾಗಿವೆ, ಅಲ್ಲದೆ ಅದು ಮಾನವನ ಸಮಸ್ತ ಸಮಸ್ಯೆಗಳಿಗೆ ಯಾವುದೇ ಪರಿಹಾರ ಸೂಚಿಸುವುದಿಲ್ಲವೆಂಬುದು ಗಮನಾರ್ಹ ಅಂಶವಾಗಿದೆ. ಪ್ರಜಾಪ್ರಭುತ್ವವು ರಾಜಕೀಯ ಕಾರ್ಯತಂತ್ರವಾಗಿರುವುದರಿಂದ ಹೆಚ್ಚೆಂದರೆ ಅದನ್ನೊಂದು ರಾಜಕೀಯ ವ್ಯವಸ್ಥೆಯ ರೂಪದಲ್ಲಿ ಗುರುತಿಸಬಹುದು. ಆದರೆ ಜೀವನದ ಸಕಲವಿಧ ಸಮಸ್ಯೆಗಳಿಗೆ ಪ್ರಜಾಸತ್ತೆಯ ಬಳಿ ಯಾವುದೇ ಪರಿಹಾರವಿಲ್ಲ.

ಕಮ್ಯುನಿಸಮ್ ಅಥವಾ ಸಮತಾವಾದದ ಸ್ಥಿತಿಯೂ ಇದುವೇ ಆಗಿದೆ. ಅದು ಮೂಲತಃ ಕೇವಲ ಒಂದು ಆರ್ಥಿಕ ವ್ಯವಸ್ಥೆ ಮಾತ್ರವಾಗಿದೆ. ಸಂಘರ್ಷಾತ್ಮಕ ಭೌತಿಕ ತತ್ವಶಾಸ್ತ್ರ ಅಥವಾ ಚರಿತ್ರೆಯ ಭೌತಿಕ ವ್ಯಾಖ್ಯಾನವೇ ಮುಂತಾದ ಅದರ ಯಾವ ಸ್ವರೂಪಗಳೂ ಸಮಸ್ಯೆಗಳ ಪರಿಹಾರವನ್ನು ಸಮರ್ಪಿಸುವುದಿಲ್ಲ. ಬದಲಾಗಿ ಆರ್ಥಿಕ ಪರಿಹಾರವೇ ಸರಿ ಎಂಬುದಕ್ಕೆ ಆಧಾರಗಳನ್ನು ಒದಗಿಸುತ್ತವೆ. ಅದು ಆರ್ಥಿಕ ವ್ಯವಸ್ಥೆಗಳ ಸ್ತಂಭಗಳ ಸ್ಥಾನವನ್ನು ಮಾತ್ರ ಹೊಂದಿದೆ. ಪ್ರಚಲಿತ ಸಮತಾವಾದದ ರಾಜಕೀಯ ವ್ಯವಸ್ಥೆ ಶಾಪಗ್ರಸ್ತ ವ್ಯವಸ್ಥೆಯಾಗಿದೆ. ಸರ್ಕಾರಿ ಯಂತ್ರವೇ ಬಾಕಿಯುಳಿಯಬಾರದು ಎಂಬ ಅದರ ರಾಜಕೀಯ ಪರಿಹಾರವು ತೀರಾ ವ್ಯಾವಹಾರಿಕವಾಗಿದೆ.

ಆದ್ದರಿಂದ ಸಮತಾವಾದ ಆರ್ಥಿಕ ವ್ಯವಸ್ಥೆ ಮಾತ್ರವಾಗಿದೆ. ಈ ವ್ಯವಸ್ಥೆ ವ್ಯಕ್ತಿಗಳ ಬಂಡವಾಳಶಾಹಿತ್ವವನ್ನು ಕೊನೆಗೊಳಿಸಿ ಅತ್ಯಂತ ಕರಾಳವಾದ ಸಾಮ್ರಾಜ್ಯದ ಸರ್ವಾಧಿಕಾರ ಮತ್ತು ಭಂಡವಾಳ ಶಾಹಿತ್ವವನ್ನು ಸೃಷ್ಟಿಸುತ್ತದೆ. ಅದರ ಆಶ್ರಯದಲ್ಲಿ ಕಾರ್ಮಿಕ ಅಸಹಾಯಕನಾಗಿರುತ್ತಾನೆ. ಏಕೆಂದರೆ ಕಮ್ಯುನಿಸ್ಟ್ ವ್ಯವಸ್ಥೆಯಲ್ಲಿ ಪ್ರತಿಭಟನೆ, ಮುಷ್ಕರ, ಸಂಘಟನೆ, ಅಭಿವ್ಯಕ್ತಿಯೇ ಮುಂತಾದ ಯಾವುದೇ ವಿಧದ ಸ್ವಾತಂತ್ರ್ಯವನ್ನೂ ಜನರಿಗೆ ನೀಡಲಾಗುವುದಿಲ್ಲ. ಒಟ್ಟಿನಲ್ಲಿ ಮಾನವರ ಸಕಲ ಸಮಸ್ಯೆಗಳಿಗೆ ಪರಿಹಾರ ಸೂಚಿಸುವಂತಹ ವ್ಯವಸ್ಥೆಯೊಂದು ಇಂದು ಅಸ್ತಿತ್ವದಲ್ಲಿಲ್ಲ.

ಅಲ್ಲದೆ ನಮಗೆ ಬೇಕಾಗಿರುವುದು ಸಕಲ ಮಾನವರ ಸ್ವೈಜ ಮತ್ತು ಸಮ್ಮತ ಹಿತಾಸಕ್ತಿ ಮತ್ತು ತಗಾದೆಗಳನ್ನು ಮುಂದಿಟ್ಟು ರೂಪಿಸಲಾದ ವ್ಯವಸ್ಥೆಯಾಗಿದೆ. ನಿರ್ದಿಷ್ಟ ವರ್ಗ, ಪಂಗಡ ಅಥವಾ ರಾಷ್ಟ್ರವನ್ನು ಮುಂದಿಟ್ಟು ರೂಪಿಸಲಾದ ವ್ಯವಸ್ಥೆಯೊಂದು ಸಕಲ ಮಾನವರ ಸಮಸ್ಯೆಗಳಿಗೆ ಪರಿಹಾರವನ್ನು ಸೂಚಿಸಲಾರದು. ಅಂತೆಯೇ ಪ್ರಸ್ತುತ ವರ್ಗ, ಪಂಗಡ ಮತ್ತು ರಾಷ್ಟ್ರದ ಸಮಸ್ಯೆಗಳೂ ಅದರಿಂದ ಬಗೆಹರಿಯಲಾರದು. ಏಕೆಂದರೆ ಇಂದು ಸಕಲ ವಿಶ್ವವೇ ಒಂದಾಗಿದೆ. ಇತರ ರಾಷ್ಟ್ರಗಳ ಸಮಸ್ಯೆಗಳು ಬಗೆಹರಿಯದೆ ಉಳಿದಿದ್ದರೆ ಯಾವುದಾದರೊಂದು ರಾಷ್ಟ್ರ-ಪ್ರತ್ಯೇಕವಾಗಿ, ಇಂದಿನ ವಿಶ್ವದಲ್ಲಿ ತನ್ನ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲಾರದು.

ಎಲ್ಲಾ ವರ್ಗ, ವಲಯ ಮತ್ತು ರಾಷ್ಟ್ರಗಳಿಗೆ ಅಥವಾ ಸಕಲ ಮಾನವರಿಗೆ, ಅವರ ಎಲ್ಲ ಸಮಸ್ಯೆಗಳಿಗೆ ಪರಿಹಾರವನ್ನು ಸೂಚಿಸುವಂತಹ ಜೀವನ ವ್ಯವಸ್ಥೆ ಇಂದು ಮಾನವಕುಲದ ಪ್ರಾಥಮಿಕ ಬೇಡಿಕೆಯಾಗಿದೆ. ಅಂತಹ ವ್ಯವಸ್ಥೆಯೊಂದು ಇಂದು ಅಸ್ತಿತ್ವದಲ್ಲಿದೆಯೇ? ವಾಸ್ತವದಲ್ಲಿ ಮಾನವರ ಸ್ವಯಂಕೃತ ವ್ಯವಸ್ಥೆಗಳ ಪೈಕಿ ಅಂತಹ ಯಾವ ವ್ಯವಸ್ಥೆಯೂ ಅಸ್ತಿತ್ವದಲ್ಲಿಲ್ಲ. ವಿಭಿನ್ನ ಸಮುದಾಯ ಬಹಳ ಚಿಂತನ-ಮಂಥನಗಳನ್ನು ನಡೆಸಿದ ನಂತರ ರೂಪಿಸಿದ ಕಾನೂನುಗಳು ಯಾವುದಾದರೂ ನಿರ್ದಿಷ್ಟ ಸಮುದಾಯ ಅಥವಾ ರಾಷ್ಟ್ರವನ್ನು ಮುಂದಿರಿಸಿ ರೂಪಿಸಿದವುಗಳಾಗಿವೆ. ಅದರಲ್ಲೂ ಪ್ರಬಲ ಮತ್ತು ಬಂಡವಾಳಶಾಹಿ ವರ್ಗದ ಹಕ್ಕುಗಳನ್ನಷ್ಟೇ ಸಂರಕ್ಷಿಸಲಾಗಿದೆ. ಸ್ವತಃ ನಮ್ಮ ದೇಶದ ಸಂವಿಧಾನವನ್ನೇ ತೆಗೆದುಕೊಳ್ಳಿ. ಅದನ್ನು ನಮ್ಮ ದೇಶದ ಅವಶ್ಯಕತೆಗಳನ್ನು ಮುಂದಿರಿಸಿ ಬುದ್ಧಿಜೀವಿಗಳ ಕೂಟ ರೂಪಿಸಿದೆ. ಆದರೆ ಅದರ ರೂಪೀಕರಣದಿಂದ ಈ ತನಕದ ಅವಧಿಯಲ್ಲಿ ತಿದ್ದುಪಡಿಗಳ ಮೇಲೆ ತಿದ್ದುಪಡಿಗಳು ನಡೆಯುತ್ತಲೇ ಇವೆ. ಆದರೆ ಜನಸಾಮಾನ್ಯರ ಹಕ್ಕುಗಳ ಸಂರಕ್ಷಣೆ ಮತ್ತು ಹಿಂದುಳಿದ ವರ್ಗಗಳ ಸಮಸ್ಯೆಗಳನ್ನು ಪರಿಹರಿಸುವಲ್ಲಿ ಅದು ನಿರಂತರ ವಿಫಲವಾಗಿದೆ. ಇನ್ನು ಒಂದು ವೇಳೆ ಅದು ಸಮಸ್ಯೆಗಳನ್ನು ಪರಿಹರಿಸುವಲ್ಲಿ ಯಶಸ್ವಿಯಾಗಿದ್ದರೂ ಅದರ ಕಾರ್ಯಕ್ಷೇತ್ರ ಭಾರತ ಮಾತ್ರವಾಗಿದೆ. ಭಾರತದ ಹೊರಗಿನ ಜನರನ್ನು ಮತ್ತು ಅವರ ಸಮಸ್ಯೆಗಳನ್ನು ಈ ಸಂವಿಧಾನ ಪರಿಗಣಿಸುವುದಿಲ್ಲ. ಲೋಕದ ಸಮಸ್ತ ಸಂವಿಧಾನ ಮತ್ತು ಕಾನೂನುಗಳ ಸ್ಥಿತಿ ಇದುವೇ ಆಗಿದೆ. ಎಲ್ಲವೂ ನಿರ್ದಿಷ್ಟ ಸಮುದಾಯ ಅಥವಾ ರಾಷ್ಟ್ರದ

ಸೀಮೆಯನ್ನು ಮಾತ್ರವೇ ಹೊಂದಿದೆ.

ಸಮತಾವಾದವು ನಿರ್ದಿಷ್ಟ ಸಮುದಾಯ ಅಥವಾ ರಾಷ್ಟ್ರದ ಮಟ್ಟದಿಂದ ಮೇಲೆದ್ದು ವಿಶಾಲ ಮಾನವಕುಲವನ್ನು ದೃಷ್ಟಿಯಲ್ಲಿರಿಸುತ್ತದೆ ಎಂಬುದರಲ್ಲಿ ಸಂಶಯವಿಲ್ಲ. ಆದರೆ ಅದರ ಲಕ್ಷ್ಯವೂ ಸಮಸ್ತ ಮಾನವಕುಲವಲ್ಲ, ಬದಲಾಗಿ ಕಾರ್ಮಿಕರಾಗಿದ್ದಾರೆ. ಇನ್ನು ಲೋಕದಲ್ಲಿರುವ ಧರ್ಮಗಳ ಮಟ್ಟಿಗೆ ಹೇಳುವುದಾದರೆ ಅದು ನಾಗರಿಕ ಜೀವನ ಅದರಲ್ಲೂ ಆಧುನಿಕ ನಾಗರಿಕ ಜೀವನದ ಸಮಸ್ಯೆಗಳನ್ನು ಪರಿಹರಿಸುವ ಅರ್ಹತೆಯನ್ನು ಸರ್ವಥಾ ಹೊಂದಿಲ್ಲ. ಅಲ್ಲದೆ ಅವು ಸಕಲ ಮಾನವರಿಗೆ ಸಮಾನ ಸ್ಥಾನವನ್ನು ನೀಡಿ ಅವರ ಸಮಸ್ಯೆಗಳನ್ನು ಪರಿಹರಿಸಬಯಸುವುದೂ ಇಲ್ಲ.

ಯಾವುದೇ ಗುಂಪು, ವರ್ಗ, ಪಂಗಡ ಅಥವಾ ರಾಷ್ಟ್ರದ ಬದಲು ಭೂಮುಖದ ಮೇಲೆ ವಾಸಿಸುವ ಸಕಲ ಮಾನವರನ್ನು ಏಕ ರೀತಿಯಲ್ಲಿ ಮುಂದಿರಿಸುವ ವ್ಯವಸ್ಥೆ ಇಸ್ಲಾಮ್ ಮಾತ್ರವಾಗಿದೆ. ಅವರ ಸಕಲ ಸಮಸ್ಯೆಗಳಿಗೆ ಅದು ನ್ಯಾಯಸಮ್ಮತ ಮತ್ತು ಪ್ರಾಯೋಗಿಕ ಪರಿಹಾರೋಪಾಯಗಳನ್ನು ನೀಡುತ್ತದೆ. ಈ ಪರಿಹಾರೋಪಾಯಗಳು 1400 ವರ್ಷಗಳ ಮೊದಲೂ ನ್ಯಾಯಸಮ್ಮತ ಮತ್ತು ವ್ಯಾವಹಾರಿಕವಾಗಿದ್ದವು. ಆಗಿನ ಕಾಲದ ಸಮಸ್ಯೆಗಳಿಗೆ ಅದು ಮಾದರಿಯೋಗ್ಯ ಪರಿಹಾರವೆಂದು ಸಾಬೀತಾಯಿತು. ಇಂದಿನ ಅಣುಯುಗದ ಅತ್ಯಂತ ಕಠಿಣ ಸಮಸ್ಯೆಗಳಿಗೂ ಅದು ನ್ಯಾಯಯುತ ಮತ್ತು ವ್ಯಾವಹಾರಿಕ ಪರಿಹಾರವನ್ನು ಮುಂದಿಡುತ್ತದೆ. ಅದು ಅತ್ಯಂತ ಸಮಗ್ರ, ಸಾರ್ವತ್ರಿಕ, ನ್ಯಾಯಸಮ್ಮತ, ವ್ಯಾವಹಾರಿಕ ಮತ್ತು ಸಕಲ ಮಾನವರಿಗೆ ಅನ್ವಯಿಸುವ ದೇವದತ್ತ ಪರಿಹಾರವಾಗಿದೆ.

## 7. ಮಾನವೀಯ ಏಕತೆ

ಸಮಸ್ತ ಭೂಮುಖ ಒಂದು, ಮಾನವಕುಲ ಒಂದು ಮತ್ತು ಮಾನವ ಕುಲದ ಹಿತಾಸಕ್ತಿಯೂ ಒಂದು ಎಂಬುದು ಚಿರವಾಸ್ತವಿಕತೆಯಾಗಿದೆ. ಆದರೆ ಇದಕ್ಕೆ ಮೊದಲು ಈ ವಾಸ್ತವಿಕತೆಯನ್ನು ಜನರು ಹೆಚ್ಚು ಮನಗಂಡಿರಲಿಲ್ಲ. ರಾಷ್ಟ್ರ ಮತ್ತು ಸಮುದಾಯಗಳು ಭಿನ್ನಭಿನ್ನವಾಗಿದ್ದುವು. ಅವುಗಳ ನಡುವೆ ಪರಸ್ಪರ ಯಾವುದೇ ರೀತಿಯ ಪ್ರಭಾವವಿರಲಿಲ್ಲ. ಯಾರಾದರೊಬ್ಬ ಮಹಾನ್ ವಿಜಯಿ ಅಥವಾ ಮಹಾನ್ ಸುಧಾರಕನ ಉಗಮದಿಂದ ಕೆಲವೊಮ್ಮೆ ಈ ಅಂತರ ಕಡಿಮೆಯಾಗುತ್ತಿತ್ತು ಮತ್ತು ವಿದೂರ ರಾಷ್ಟ್ರಗಳು ಪರಸ್ಪರ ಹತ್ತಿರವಾಗುತ್ತಿದ್ದುವು. ಇಂದು ಶರವೇಗದ ಸಂಪರ್ಕ ಸಾಧನಗಳು ಸಮಸ್ತ ಜಗತ್ತನ್ನು ಒಂದಾಗಿಸಿದೆ. ಗಂಟೆಗಳೊಳಗೆ ನಾವು ವಿದೂರ ಪ್ರದೇಶವನ್ನು ತಲಪಬಹುದಾಗಿದೆ. ಮಾಧ್ಯಮಗಳು ಎಷ್ಟು ಅಭಿವೃದ್ಧಿ ಹೊಂದಿವೆಯೆಂದರೆ ಇಂಗ್ಲೆಂಡ್-ಅಮೇರಿಕದಿಂದ ಬಿತ್ತರಿಸಲ್ಪಡುವ ವಾರ್ತೆಗಳನ್ನು ಆ ಕ್ಷಣವೇ ನಾವು ಆಲಿಸಬಹುದಾಗಿದೆ. ಅತ್ಯಂತ ಮಾರಕ ಮತ್ತು ವೇಗಗಾಮಿ ಆಯುಧಗಳು ಇಂದು ಜಗತ್ತನ್ನು ಅತ್ಯಂತ ಅಪಾಯಕಾರಿಯಾದ

ತಿರುವಿನಲ್ಲಿ ತಂದು ನಿಲ್ಲಿಸಿದೆ. ಎರಡು ರಾಷ್ಟ್ರಗಳ ನಡುವಿನ ದರ್ಪಣ ಸಮಸ್ತ ಜಗತ್ತಿನ ಮೇಲೆ ತನ್ನ ಪ್ರಭಾವ ಬೀರಬಹುದು. ಯಾವುದೇ ಪ್ರಾಂತೀಯ ಸಂಘರ್ಷ ಯಾವ ಸಂದರ್ಭದಲ್ಲಾದರೂ ಬೃಹತ್ ಶಕ್ತಿಗಳ ಮೂರ್ಖತನದಿಂದ ಜಾಗತಿಕ ಸಮರ ಅಥವಾ ಅಣುಯುದ್ಧದಲ್ಲಿ ಪರ್ಯವಸಾನಗೊಳ್ಳುವ ಸಾಧ್ಯತೆ ಇದೆ. ಮುಂದುವರಿದ, ಪ್ರಗತಿಶೀಲ ಮತ್ತು ಹಿಂದುಳಿದ ರಾಷ್ಟ್ರಗಳ ನಡುವಿನ ಹಿತಾಸಕ್ತಿಗಳ ಸಂಘರ್ಷ ಜಾಗತಿಕ ವಿದ್ಯಮಾನಗಳನ್ನು ಕೆಡಿಸುತ್ತಿದೆ. ಜಗತ್ತಿನ ಬೃಹತ್ ಸಾಮ್ರಾಜ್ಯಶಾಹಿ ಶಕ್ತಿಗಳು ತಮ್ಮ ಹಿತಾಸಕ್ತಿಗಳಾಗಿ ವಿಶ್ವದ ರಾಷ್ಟ್ರಗಳನ್ನು ಯುದ್ಧದ ವಿನಾಶಕೂಪಕ್ಕೆ ತಳ್ಳಿ ಬಿಡಲು ಅಣಿಯಾಗಿವೆ. ಭಿನ್ನಮತ ಮತ್ತು ಸಂಘರ್ಷಕ್ಕೆ ಇಂದು ಹುಟ್ಟಿಕೊಂಡಿರುವಷ್ಟು ಕಾರಣಗಳು ಹಿಂದೆಂದೂ ಅಸ್ತಿತ್ವದಲ್ಲಿರಲಿಲ್ಲ. ಅಲ್ಲದೆ ಹಿಂದೆ ಪರಸ್ಪರ ಸಂಘರ್ಷ ಇಂದಿನಷ್ಟು ಅಪಾಯಕಾರಿಯೂ ಆಗಿರಲಿಲ್ಲ. ಅಂತೆಯೇ ಇಂದು ಮಾನವಕುಲಕ್ಕೆ ಐಕಮತ್ಯ ಮತ್ತು ಅದರ ಕಾರಣ ಹಾಗೂ ಪ್ರೇರಕಗಳ ಅವಶ್ಯಕತೆ ಇರುವಷ್ಟು ಹಿಂದೆಂದೂ ಇರಲಿಲ್ಲ. ಆದರೆ ದುರದೃಷ್ಟವಶಾತ್ ಲೋಕದ ವಿಭಿನ್ನ ವ್ಯವಸ್ಥೆ ಮತ್ತು ಧರ್ಮಗಳ ಬಳಿ ಭಿನ್ನಮತ ಮತ್ತು ಸಂಘರ್ಷವನ್ನು ಹೆಚ್ಚಿಸುವ ಸಾಧನಗಳಿವೆಯೇ ಹೊರತು ಐಕಮತ್ಯವನ್ನುಂಟು ಮಾಡುವ ಯಾವುದೇ ವ್ಯವಸ್ಥೆಯಿಲ್ಲ.

ಇಸ್ಲಾಮ್ ಮಾನವನ ಏಕತೆಗಾಗಿ ನಾಲ್ಕು ನೈಸರ್ಗಿಕ ಮತ್ತು ಸುದೃಢ ಬುನಾದಿಗಳನ್ನು ಒದಗಿಸುತ್ತದೆ. ಈ ಬುನಾದಿಗಳು ಯಾವುದೆಂದರೆ- ಏಕದೇವ, ಏಕಮಾನವಕುಲ, ಏಕ ವ್ಯವಸ್ಥೆ ಮತ್ತು ಏಕ ಹಿತಾಸಕ್ತಿ.

ಸಕಲ ನಿಸರ್ಗದ ಮತ್ತು ಸಮಸ್ತ ಮಾನವಕುಲದ ಸೃಷ್ಟಿಕರ್ತ, ಒಡೆಯ, ಪರಿಪಾಲಕ ಮತ್ತು ಆಜ್ಞಾಧಿಕಾರಿಯಾದ ಏಕದೇವನನ್ನು ಪ್ರಭು ಮತ್ತು ಆಜ್ಞಾಧಿಕಾರಿಯೆಂದು ಸಮ್ಮತಿಸಿ, ಅವನ ಅನುಸರಣೆಗೈಯುವುದು ಮಾನವೀಯ ಏಕತೆಗೆ ಇರುವ ಅತ್ಯಂತ ನೈಸರ್ಗಿಕ ಬುನಾದಿಯಾಗಿದೆ. ಮಾನವರೆಲ್ಲರೂ ಆದಿಯ ಜೋಡಿಯಾದ ಆದಮ್ ಮತ್ತು ಹವ್ವಾರ ಮಕ್ಕಳಾಗಿದ್ದಾರೆ. ಆದ್ದರಿಂದ ಮಾನವ ಸಮುದಾಯ ವಿಭಿನ್ನ ದೇಶ ಮತ್ತು ಸಮುದಾಯಕ್ಕೆ ಸೇರಿರುವುದರ ಹೊರತಾಗಿಯೂ ಮೂಲತಃ ಒಂದೇ ಕುಟುಂಬವಾಗಿದೆ. ಅವರ ಕಲ್ಯಾಣ ವಿಭಿನ್ನ ಮತ್ತು ಪರಸ್ಪರ ತದ್ವಿರುದ್ಧವಾದ ಜೀವನ ವ್ಯವಸ್ಥೆಯನ್ನು ಅನುಸರಿಸುವುದರಲ್ಲಿ ಅಡಕವಾಗಿಲ್ಲ. ಏಕೆಂದರೆ ಆ ಪೈಕಿ ಹೆಚ್ಚಿನೆಲ್ಲಾ ವ್ಯವಸ್ಥೆಗಳು ಅಪರಿಪೂರ್ಣ, ವಿನಾಶಕಾರಕ ಮತ್ತು ಪರಸ್ಪರ ಸಂಘರ್ಷಿಸುವವುಗಳಾಗಿವೆ. ಮಾನವಕುಲದ ಹಿತ ಏಕದೇವನಿಂದ ರೂಪಿತ ಜೀವನ ವ್ಯವಸ್ಥೆಯನ್ನು ಅಳವಡಿಸುವುದರಲ್ಲಿ ಮಾತ್ರವಿದೆ. ಅದು ಸಕಲ ಮಾನವರಿಗೆ ನಿಷ್ಪಕ್ಷಪಾತಿ ನ್ಯಾಯ, ಸಮಗ್ರ ಪ್ರಗತಿ ಹಾಗೂ ಲೌಕಿಕ ಮತ್ತು ಪಾರಮಾರ್ಥಿಕ ವಿಜಯದ ಭರವಸೆ ನೀಡುತ್ತದೆ. ಮಾನವರೆಲ್ಲರ ನೈಜ ಹಿತಾಸಕ್ತಿಯೂ ಒಂದಾಗಿದೆ. ಪರಲೋಕದ ಶಾಶ್ವತ ವಿಜಯ ಮತ್ತು ಅಲ್ಲಾಹನ ಸಂಪ್ರೀತಿಯೇ ಈ ಹಿತಾಸಕ್ತಿ. ಈ ಹಿತಾಸಕ್ತಿಯನ್ನು

ಸಾಧಿಸಬೇಕಾದರೆ ಅಲ್ಲಾಹನ ನಿಸ್ಪೃಹ ದಾಸ್ಯ ಮತ್ತು ಅವನ ಧರ್ಮದ ನೈಜ ಅನುಸರಣ ಮಾಡಬೇಕಾಗಿದೆ. ಪರಿಣಾಮವಾಗಿ ವ್ಯಕ್ತಿ, ವರ್ಗ, ವಂಶ ಮತ್ತು ಸಮುದಾಯಗಳನ್ನು ಯಾವ ರೀತಿ ತರಬೇತಿಗೊಳಿಸಲಾಗುತ್ತದೆಂದರೆ ಅವು ತಮ್ಮ ಸಮ್ಮತಾಸಮ್ಮತ ಹಿತಾಸಕ್ತಿಗಳಿಗಾಗಿ ಸಂಘರ್ಷ ನಡೆಸುವುದಿಲ್ಲ, ಯುದ್ಧ ಸಾರುವುದಿಲ್ಲ, ಬದಲಾಗಿ ಪರಸ್ಪರರ ಹಕ್ಕುಗಳನ್ನು ನೀಡುವುದು ತಮ್ಮ ಕರ್ತವ್ಯವೆಂದು ಭಾವಿಸುತ್ತವೆ. ತ್ಯಾಗದ ಮನೋಭಾವದೊಂದಿಗೆ ಮಾನವ ಸೇವೆಯಲ್ಲಿ ನಿರತವಾಗುವುದರಲ್ಲೇ ಉಭಯ ಲೋಕಗಳ ಹಿತ ಅಡಕವಾಗಿದೆ ಎಂಬ ಭಾವನೆಯನ್ನು ಬೆಳೆಸಿಕೊಳ್ಳುತ್ತವೆ.

## 8. ಶಾಂತಿ ಸಮಾಧಾನ

ಇದು ಇಂದು ಲೋಕದೆಲ್ಲೆಡೆಯೂ ನಾಸ್ತಿಯಾಗಿದೆ. ಬಡ ಮತ್ತು ಹಿಂದುಳಿದ ರಾಷ್ಟ್ರಗಳ ಜನರು ತಮ್ಮ ಸಂಕಷ್ಟಗಳಿಂದಾಗಿ ಗೊಂದಲಕ್ಕೀಡಾಗಿದ್ದಾರೆ. ಅತ್ಯಂತ ಪ್ರಗತಿಪರ ಮತ್ತು ಸಿರಿವಂತ ರಾಷ್ಟ್ರಗಳ ಗೊಂದಲವೂ ಕಡಿಮೆಯದ್ದಲ್ಲ. ರಷ್ಯಾದ ಅಸಾಮಾನ್ಯ ನಿಬಂಧನೆಗಳಿಂದ ಬೇಸತ್ತು ಜನರು ಸ್ವತಂತ್ರವಾಗಿ ಉಸಿರೆಳೆಯಲು ಮತ್ತು ವಿಚಾರ ಮತ್ತು ಆಚಾರದ ಸ್ವಾತಂತ್ರ್ಯವನ್ನು ಪಡೆಯಲಿಕ್ಕಾಗಿ ಬೇರೆ ರಾಷ್ಟ್ರಗಳಲ್ಲಿ ಆಶ್ರಯ ಪಡೆಯಲು ನಿರ್ಬಂಧಿತರಾಗಿದ್ದಾರೆ. ಅಮೇರಿಕದ ಕೋಟ್ಯಾಧೀಶರ ಮಕ್ಕಳು ಇಂದು ಹಿಪ್ಪಿಗಳಾಗಿ ಶಾಂತಿಯನ್ನರಸುತ್ತಾ ದಿಕ್ಕೆಟ್ಟು ತಿರುಗುತ್ತಿದ್ದಾರೆ. ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ನೈತಿಕ, ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಸಮಸ್ಯೆಗಳು ಪೌರಾತ್ಯ ರಾಷ್ಟ್ರಗಳಿಗಿಂತ ಕಡಿಮೆಯೇನಿಲ್ಲ. ಕೆಲವು ಸ್ತರಗಳಲ್ಲಿ ಈ ರಾಷ್ಟ್ರಗಳ ಸ್ಥಿತಿ ಪೂರ್ವಕ್ಕಿಂತ ಹೆಚ್ಚು ಶೋಚನೀಯವಾಗಿದೆ. ಮಾನವ ಇತರ ಮಾನವರ ಮೇಲೆ ನಂಬಿಕೆಯಿರಿಸದೆ ಜೀವನ ಸಾಗಿಸಲಾರ. ಆದರೆ ಜನರು ಇಂದು ಎಷ್ಟು ಚಾರಿತ್ರ್ಯಹೀನರಾಗಿದ್ದಾರೆಂದರೆ ಇತರರ ಮೇಲೆ ವಿಶ್ವಾಸವಿರಿಸುವುದು ಆತ್ಮವಂಚನೆಗೆ ಸಮಾನವಾಗಿ ಬಿಟ್ಟಿದೆ. ಪ್ರೀತಿ ಮತ್ತು ಸೇವಾ ಮನೋಭಾವದ ಜಾಗವನ್ನು ಇಂದು ದ್ವೇಷ, ಸ್ವಾರ್ಥ ಮತ್ತು ಅವಿಶ್ವಾಸ ಆಕ್ರಮಿಸಿಕೊಂಡಿದೆ. ಎಲ್ಲರೂ ತಮ್ಮದೇ ಆದ ತಾಪತ್ರಯಗಳಲ್ಲಿ ಮುಳುಗಿದ್ದಾರೆ. ಮಾನವನ ಪಾಲಿಗೆ ಶಾಂತಿಯ ಆಗರವಾಗಿದ್ದ ಮನೆ ಇಂದು ಚಿಂತೆಗೀಡು ಮಾಡುವ ಸ್ಥಳವಾಗಿ ಬಿಟ್ಟಿದೆ. ಪತಿ-ಪತ್ನಿಯ ನಡುವೆ, ತಂದೆ-ಮಕ್ಕಳ ನಡುವೆ ಮತ್ತು ಸಹೋದರ-ಸಹೋದರರ ನಡುವೆ ಪರಸ್ಪರ ಪ್ರೇಮ ಮತ್ತು ವಿಧೇಯತೆಯ ಸಂಬಂಧ ಮತ್ತು ಆ ಮೂಲಕ ದೊರೆಯುತ್ತಿದ್ದ ಸಮಾಧಾನವೆಂಬ ಅನುಗ್ರಹ ಇಂದು ಕೊನೆಗೊಂಡಿದೆ. ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಂತೂ ಕುಟುಂಬ ಒಡೆದು ಚೂರುಚೂರಾಗಿದೆ. ಪ್ರೀತಿ ಮತ್ತು ಅನುಸರಣೆಯ ಭಾವನೆ ಸಂಪೂರ್ಣ ನಾಸ್ತಿಯಾಗಿದೆ. ಸುಳ್ಳು, ಮೋಸ, ವಂಚನೆ, ಸಂಚು, ಶೋಷಣೆ, ಅತಿಕ್ರಮದಂತಹ ಕೆಡುಕುಗಳು ಇಂದು

ಪಿಡುಗಿನಂತೆ ವ್ಯಾಪಕಗೊಂಡಿವೆ. ಪರಿಣಾಮವಾಗಿ ವಿಶ್ವವು ನರಕಸದೃಶವಾದ ಗೊಂದಲಗಳಲ್ಲಿ ಸಿಲುಕಿದೆ. ಲೌಕಿಕ ಮೋಹ, ಆರಾಮ ಪ್ರಿಯತೆ ಮತ್ತು ಥಳಕು ಬಳಕಿನ ಮಮತೆ ಅನಿಯಂತ್ರಿತವಾಗಿ ಹೆಚ್ಚುತ್ತಿದೆ. ಮಾನವರ ಆಸೆ-ಆಕಾಂಕ್ಷೆಗಳು ಈಡೇರುತ್ತಿಲ್ಲ, ಈಡೇರಲು ಸಾಧ್ಯವೂ ಇಲ್ಲ. ಪರಿಣಾಮವಾಗಿ ಚಿತ್ತದ ಶಾಂತಿ ಇಲ್ಲದಾಗಿ, ಲೋಕ ನಾಲ್ಕೂ ನಿಟ್ಟನಿಂದ ಗೊಂದಲಗಳಲ್ಲಿ ಸಿಲುಕಿಗೊಂಡಿದೆ.

ಲೋಕದ ವಂಚಿತ ಸ್ಥಿತಿ ಮತ್ತು ದುಃಖಗಳ ಭಾರವನ್ನು ಕಡಿಮೆಗೊಳಿಸುವ ಸಾಧನ ಪರಲೋಕದ ಶಾಶ್ವತ ಅನುಗ್ರಹಗಳ ಗಳಿಕೆಯ ಬಗೆಗಿನ ಭರವಸೆಯಾಗಿದೆ. ಆದರೆ ಪರಲೋಕದ ವಿಶ್ವಾಸ ಇಂದು ಹೊರಟು ಹೋಗಿದೆ ಅಥವಾ ಅತ್ಯಂತ ಶೋಚನೀಯ ಮಟ್ಟಕ್ಕೆ ತಲಪಿರುವಷ್ಟು ದುರ್ಬಲಗೊಂಡಿದೆ. ದೇವಸ್ಮರಣೆ, ದೇವ ಸಂಪ್ರೀತಿ, ದೇವವಿಶ್ವಾಸವೇ ಮುಂತಾದವುಗಳು ಸಂಕಷ್ಟಗಳ ವೇಳೆ ಅಸಾಮಾನ್ಯ ಪ್ರತಿರೋಧ ಶಕ್ತಿಯನ್ನು ಸೃಷ್ಟಿ ಮಾಡುತ್ತದೆ. ಆದರೆ ಇಂದಿನ ಮಾನವ ಈ ಅನುಗ್ರಹಗಳಿಂದ ಮುಕ್ತನಾಗಿದ್ದಾನೆ. ಪರಿಣಾಮವಾಗಿ ಈ ಲೋಕದಲ್ಲಿ ದೇವನ ಅತಿ ದೊಡ್ಡ ಅನುಗ್ರಹವಾದ ಶಾಂತಿ ಮತ್ತು ಸಮಾಧಾನದಿಂದಲೂ ಅವನು ವಂಚಿತನಾಗಿದ್ದಾನೆ.

ಮಾನವ ಶಾಂತಿ ಸಮಾಧಾನವನ್ನು ತನ್ನದಾಗಿಸಿಕೊಳ್ಳಬೇಕಾದರೆ ಅವನಿಗೆ ನೈಜ ಸ್ವಾತಂತ್ರ್ಯ ಲಭ್ಯವಾಗಬೇಕು, ಗೌರವ ಮತ್ತು ಉತ್ತುಂಗತೆ ಪ್ರಾಪ್ತವಾಗಬೇಕು, ನ್ಯಾಯ-ನೀತಿ ದೊರೆಯುತ್ತಿರಬೇಕು, ಸಮಾಜ ನೈತಿಕ ಮೌಲ್ಯಗಳ ಮೇಲೆ ನೆಲೆನಿಂತಿರಬೇಕು, ಜನರು ಸಚ್ಚಾರಿತ್ರ್ಯವಂತರೂ ವಿಶ್ವಾಸಾರ್ಹರೂ ಆಗಿರಬೇಕು, ಅವರ ನಡುವೆ ಪರಸ್ಪರ ಸೋದರತೆ ಮತ್ತು ಪ್ರೀತಿ ಇರಬೇಕು, ಪರಸ್ಪರರ ದುಃಖದುಮ್ಮಾನಗಳಲ್ಲಿ ಪಾಲ್ಗೊಳ್ಳುವವರೂ ಪರಸ್ಪರ ಸಹಕರಿಸುವವರೂ ಆಗಿರಬೇಕು. ಎಲ್ಲರಿಗೂ ಸರ್ವಾಂಗೀಣ ಪ್ರಗತಿಯ ಆಸ್ಪದವಿರಬೇಕು, ಸರ್ವ ಮಾನವರ ಸಕಲ ಸಮಸ್ಯೆಗಳು ಪರಿಹರಿಸಲ್ಪಡಬೇಕು, ಜನರ ನಡುವೆ ಸಂಘರ್ಷ ಮತ್ತು ದ್ವೇಷದ ಬದಲು ಹೊಂದಾಣಿಕೆ, ಸೌಹಾರ್ದ ಮತ್ತು ಐಕಮತ್ಯದ ಸಂಬಂಧವಿರಬೇಕು, ಅವರು ಲೋಕ ಹಿತಾಸಕ್ತಿಯ ಮೋಹದಲ್ಲಿ ಸಿಲುಕಿರುವ ಬದಲು ಅಲ್ಲಾಹನ ಸಂಪ್ರೀತಿ ಮತ್ತು ಪರಲೋಕದ ಶಾಶ್ವತ ವಿಜಯವನ್ನರಸುವವರಾಗಿರಬೇಕು, ಅಲ್ಲಾಹನ ಸ್ಮರಣೆ ಮತ್ತು ಸಂಪ್ರೀತಿಯಿಂದ ಹೃದಯ ಮಗ್ನವಾಗಿರಬೇಕು, ದೇವನ ಸಹಾಯಹಸ್ತ ಮತ್ತು ವಿಘ್ನವಿನಾಶಕತ್ವದ ಬಗ್ಗೆ ಹಾಗೂ ಅವನ ಅನುಗ್ರಹ ಮತ್ತು ನೆರವಿನ ಬಗ್ಗೆ ಪೂರ್ಣ ಭರವಸೆಯಿರಬೇಕು, ಅವನ ನಿಸ್ಸೀಮ ಪ್ರತಿಫಲದ ನಿರೀಕ್ಷೆಯೇ ಮಾನವನ ಉಸಿರಾಗಿರಬೇಕು, ಈ ಎಲ್ಲಾ ಅನುಗ್ರಹಗಳನ್ನು ಮಾನವನಿಗೆ ದಯಪಾಲಿಸಲು ನಿಸ್ಸಂಶಯವಾಗಿ ಇಸ್ಲಾಮಿಗೆ ಮಾತ್ರವೇ ಸಾಧ್ಯವಿದೆ.

"ಕೇಳಿರಿ, ಮನಶ್ಶಾಂತಿ ಒದಗುವುದು ಅಲ್ಲಾಹನ ಸ್ಮರಣೆಯಿಂದಲೇ ಎಂಬುದು ಖಚಿತ."

(ಅರ್ರಅದ್: 28)

"ಅಲ್ಲಾಹನೊಂದಿಗೆ ಸಂಬಂಧ ಸ್ಥಾಪಿಸಿ ಕೊಂಡಿರಿ, ಅವನೇ ನಿಮ್ಮ ರಕ್ಷಕ ಮಿತ್ರ, ಅತ್ಯಂತ ಶ್ರೇಷ್ಠ ರಕ್ಷಕ ಮಿತ್ರನವನು ಮತ್ತು ಅತ್ಯುತ್ತಮ ಸಹಾಯಕನವನು."
(ಅಲ್ ಹಜ್ಜ್: 78)

## 9. ಅಲ್ಲಾಹನ ಸಂಪ್ರೀತಿ

ಮಾನವನ ಯಶಸ್ಸು ಮತ್ತು ವಿಜಯ ಹಾಗೂ ಯಾವುದೇ ವ್ಯವಸ್ಥೆ ಅನುಗ್ರಹಪ್ರದ ವ್ಯವಸ್ಥೆಯಾಗಿರುವುದಕ್ಕೆ ಇರುವ ಅತ್ಯಂತ ಪ್ರಮುಖ ಆಧಾರವು ಅವನ ಸೃಷ್ಟಿಕರ್ತ, ಒಡೆಯ, ಪರಿಪಾಲಕ ಹಾಗೂ ಆಜ್ಞಾಧಿಕಾರಿಯಾದ ಅಲ್ಲಾಹನು ಅವನಿಂದ ಸಂತುಷ್ಟನಾಗಿರಬೇಕು ಎಂಬುದಾಗಿದೆ. ದೇವನು ಲೋಕದ ಸಕಲ ಅನುಗ್ರಹಗಳ ಮಾಲಕನಾಗಿದ್ದಾನೆ. ಮಾನವನ ಅದೃಷ್ಟ, ಅವನ ಗೌರವ ಮತ್ತು ನಿಂದ್ಯತೆ ದೇವನ ಹಸ್ತದಲ್ಲೇ ಇದೆ, ಅವನ ಕೈಯಲ್ಲೇ ವ್ಯಕ್ತಿಗಳ ಮತ್ತು ರಾಷ್ಟ್ರಗಳ ಉತ್ಥಾನ ಪತನವಿದೆ. ಅವನು ದಯಪಾಲಿಸುವುದರಿಂದಾಗಿ ವ್ಯಕ್ತಿ ಎಲ್ಲವನ್ನೂ ದೊರಕಿಸಿಕೊಳ್ಳುತ್ತಾನೆ, ಅವನು ಕಸಿದುಕೊಂಡರೆ ವ್ಯಕ್ತಿ ಅದರಿಂದ ವಂಚಿತನಾಗುತ್ತಾನೆ. ಅವನು ದಯಪಾಲಿಸದಿದ್ದರೆ ಬೇರಾರಿಗೂ ಏನನ್ನೂ ದಯಪಾಲಿಸಲು ಸಾಧ್ಯವಿಲ್ಲ. ಅವನು ದಯಪಾಲಿಸಿದರೆ ಬೇರಾರೂ ವ್ಯಕ್ತಿಯನ್ನು ವಂಚಿತಗೊಳಿಸಲಾರರು. ದೇವನ ಸಂತುಷ್ಟಿ ಲೋಕದಲ್ಲಿ ಮಾನವನ ಅತಿದೊಡ್ಡ ಆಸರೆಯಾಗಿದೆ. ಹೃದಯ ಮತ್ತು ಆತ್ಮದ ಶಾಂತಿ ಹಾಗೂ ಸಮಾಧಾನದ ಚಿಲುಮೆ ದೇವನ ಸಂಪ್ರೀತಿಯೇ ಆಗಿದೆ.

ದೇವನ ಸಂಪ್ರೀತಿಯನ್ನು ಗಳಿಸುವ ಬಗೆ ಹೇಗೆ? ಇದರ ಏಕೈಕ ಉತ್ತರವೇನೆಂದರೆ ನಾವು ದೇವನ ಸಂಪ್ರೀತಿಯ ನೈಜ ಆಕಾಂಕ್ಷಿಗಳಾಗಿರಬೇಕು. ದೇವನ ಸಂಪ್ರೀತಿಯನ್ನು ಗಳಿಸುವುದೇ ನಮ್ಮೆಲ್ಲಾ ಪ್ರಯತ್ನಗಳ ಅಂತಿಮ ಲಕ್ಷ್ಯವಾಗಿರಬೇಕು. ನಾವು ಮಾಡುವ ಯಾವುದೇ ಲೌಕಿಕ ಕೆಲಸ ನಮ್ಮ ಪ್ರಭು ನಮ್ಮಿಂದ ಸಂತುಷ್ಟನಾಗಿರಬೇಕು ಎಂಬ ಉದ್ದೇಶದಿಂದ ಮಾತ್ರವೇ ಆಗಿರಬೇಕು. ಅಲ್ಲಾಹನು ಇಷ್ಟ ಪಡದ ಎಲ್ಲ ಕೆಲಸಗಳಿಂದ ನಾವು ಸರಿದು ನಿಲ್ಲಬೇಕು. ನಾವು ನಮ್ಮ ಸಮಸ್ತ ಜೀವನವನ್ನೂ ಅಲ್ಲಾಹನ ಇಚ್ಛೆಗೆ ಅಧೀನಗೊಳಿಸಬೇಕು ಮತ್ತು ಲೌಕಿಕ ಹಾಗೂ ಪಾರಮಾರ್ಥಿಕ ವಿಜಯಕ್ಕೆ ಹೇತುವಾದ ಅಲ್ಲಾಹನ ಧರ್ಮಕ್ಕೆ ಬದ್ಧಗೊಳಿಸಬೇಕು.

ಹಾಗಾದರೆ ದೇವನ ಧರ್ಮ ಎಲ್ಲಿದೆ ಎಂಬ ಪ್ರಶ್ನೆ ನಮ್ಮ ಮುಂದೆ ಬಂದು ನಿಲ್ಲುತ್ತದೆ. ಜನಸಾಮಾನ್ಯರು ಈ ಹಂತಕ್ಕೆ ಬಂದಾಗ ಚಿಂತೆಗೀಡಾಗುತ್ತಾರೆ. ವಿಶ್ವದಾದ್ಯಂತ ಮತ್ತು ಸ್ವತಃ ತನ್ನ ರಾಷ್ಟ್ರದಲ್ಲಿ ಅಸಂಖ್ಯ ಧರ್ಮಗಳಿರುವುದನ್ನು ಅವನು ಕಾಣುತ್ತಾನೆ. ಆ ಪೈಕಿ ಪ್ರತಿಯೊಂದು ಧರ್ಮವೂ ತನ್ನ ಸತ್ಯತೆಯ ಬಗ್ಗೆ ವಾದಿಸುತ್ತವೆ. ಆ ಪೈಕಿ ಯಾವುದನ್ನು ಅವನು ನೈಜ ಮತ್ತು ದೇವನ ಧರ್ಮವೆಂದು ಪರಿಗಣಿಸಬೇಕು. ಕೆಲವರು ಧರ್ಮಗಳ ಈ ಸಂತೆಯನ್ನು ಕಂಡು ಧರ್ಮವನ್ನೇ ನಿರಾಕರಿಸಿ ಬಿಡುತ್ತಾರೆ. ದೇವನ ಬಗ್ಗೆ ನಿರಪೇಕ್ಷವಾಗಿ

ಜೀವನ ಸಾಗಿಸುವುದರಲ್ಲೇ ಕ್ಷೇಮವಿದೆ ಎಂದು ಭಾವಿಸುತ್ತಾರೆ.

ದೇವನಿದ್ದಾನೆ ಮತ್ತು ಅವನು ಸಕಲ ನಿಸರ್ಗದ ಸೃಷ್ಟಿಕರ್ತ, ಪ್ರಭು, ಪರಿಪಾಲಕ ಮತ್ತು ಆಜ್ಞಾಧಿಕಾರಿಯಾಗಿದ್ದಾನೆ ಎಂಬುದು ನಿಷೇಧಿಸಲಾಗದ ಸತ್ಯವಾಗಿದೆ. ವಿಜ್ಞಾನದ ಆಧುನಿಕ ಬೆಳವಣಿಗೆಯ ಪರಿಣಾಮವಾಗಿ ಭೌತಿಕತೆ ಮತ್ತು ನಾಸ್ತಿಕತೆಯ ಸಕಲ ಬುನಾದಿಗಳು ಮೂಲೋತ್ಪಾಟನೆಗೊಂಡಿವೆ. ದೇವನ ನಿರಾಕರಣೆ ವಸ್ತುಶಃ ಜ್ಞಾನ, ವಿವೇಕ, ಅನುಭವಗಳೆಲ್ಲದರ ನಿಷೇಧವಾಗಿದೆ. ಅದು ಕ್ಷೇಮ ಮತ್ತು ವಿಜಯದ ಮಾರ್ಗವಲ್ಲ, ಬದಲಾಗಿ ಪ್ರತ್ಯಕ್ಷವಾದ ವೈಫಲ್ಯ ಮತ್ತು ವಿನಾಶದ ಮಾರ್ಗವಾಗಿದೆ.

ಈ ತಲೆಬೇನೆಯಿಂದ ದೂರ ಉಳಿಯಲು, ಮಾನವ ತೋಚಿದಂತೆ ದೇವನನ್ನು ಕಲ್ಪಿಸಿಕೊಳ್ಳಲಿ, ತನ್ನ ಆತ್ಮಸಾಕ್ಷಿಯಕರೆಗೆ ಓಗೊಡಲಿ ಎಂದು ಕೆಲವರು ಸಲಹೆ ನೀಡುತ್ತಾರೆ. ಆತ್ಮಸಾಕ್ಷಿಯ ಕರೆ ಕೆಲವೊಮ್ಮೆ ಕ್ಷೀಣವಾಗಿರುತ್ತದೆ. ಅಲ್ಲದೆ ಬೇರೆ ಬೇರೆ ವ್ಯಕ್ತಿಗಳ ಆತ್ಮಸಾಕ್ಷಿಯ ಕರೆ ಬೇರೆ ಬೇರೆಯಾಗಿರಲು ಧಾರಾಳ ಸಾಧ್ಯತೆ ಇದೆ. ಹಲವೊಮ್ಮೆ ಆತ್ಮಸಾಕ್ಷಿಯ ಕರೆ ಮಾನವನ ಆಕಾಂಕ್ಷೆ, ಚಿಂತನೆ ಮತ್ತು ಗುಮಾನಿಯಿಂದ ಪ್ರಭಾವಿತಗೊಂಡಿರುತ್ತದೆ. ಎಲ್ಲದಕ್ಕಿಂತ ಮಿಗಿಲಾಗಿ ಈ ದೃಷ್ಟಿಕೋನದಿಂದ ವ್ಯಕ್ತವಾಗುವುದೇನೆಂದರೆ ವ್ಯಕ್ತಿ ದೇವೇಚ್ಛೆಯ ಬದಲು ಸ್ವೇಚ್ಛೆಯನ್ನು ಪಾಲಿಸಬಯಸುತ್ತಾನೆ, ಇದರಿಂದ ದೇವನ ಧರ್ಮ ಮತ್ತು ಅವನ ಕಾನೂನುಗಳನ್ನು ಪಾಲಿಸಿದಂತಾಗುವುದಿಲ್ಲ, ತನ್ನ ಚಿಂತನೆ ಮತ್ತು ಕಲ್ಪನೆಗಳನ್ನು ಅನುಸರಿಸಿದಂತಾಗುತ್ತದೆ. ಈ ಧೋರಣೆಯನ್ನು ಅನುಸರಿಸುವುದರಿಂದ ನಮ್ಮ ಪ್ರಭು ನಮ್ಮಿಂದ ಸಂತುಷ್ಟನಾಗುತ್ತಾನೆಂದು ಭಾವಿಸಲು ಹೇಗೆ ಸಾಧ್ಯ? ದೇವನು ನಮ್ಮಿಂದ ಸಂತುಷ್ಟನಾಗಬೇಕಾದರೆ ಏಕಾಗ್ರಚಿತ್ತರಾಗಿ ಅವನ ಇಚ್ಛೆಯನ್ನು ಪಾಲಿಸುವವರಾಗಿರಬೇಕು. ತನ್ನ ಅಥವಾ ಇತರ ಮಾನವರ ವಿಭಾವನೆ ಮತ್ತು ಕಲ್ಪನೆಗಳನ್ನು ಅನುಸರಿಸುವ ಬದಲು ಅವನು ಕಳುಹಿಸಿರುವ ಧರ್ಮ ಮತ್ತು ಅದರಿಂದ ರೂಪಿತ ಕಾನೂನುಗಳನ್ನು ಅನುಸರಿಸುವವರಾಗಿರಬೇಕು.

ದೇವನು ತನ್ನ ಶ್ರೇಷ್ಠ ದಾಸರ ಮೂಲಕ ದೇವೇಚ್ಛೆಯೇನೆಂಬುದನ್ನು ಮಾನವರಿಗೆ ಸ್ಪಷ್ಟಪಡಿಸುತ್ತಾ ಬಂದಿದ್ದಾನೆ ಮತ್ತು ತನ್ನ ಪ್ರವಾದಿಗಳ ಮೂಲಕ ತನ್ನ ಧರ್ಮವನ್ನು ಮಾನವರಾಶಿಗೆ ತಲಪಿಸುತ್ತಾ ಬಂದಿದ್ದಾನೆ ಎಂಬುದು ನಮಗೆ ತಿಳಿದಿದೆ. ಹಾಗಿರುವಾಗ ನಾವು ಆ ಧರ್ಮವನ್ನು ಅನುಸರಿಸುವ ಬದಲು ನಮ್ಮದೇ ಆದ ಚಿಂತನೆಗಳನ್ನು ಅಥವಾ ಆತ್ಮಸಾಕ್ಷಿಯನ್ನು ಯಾಕೆ ಅನುಸರಿಸಬೇಕು? ಅದರಿಂದಾಗಿ ಯಾವುದೇ ವ್ಯವಸ್ಥೆ ರೂಪುಗೊಳ್ಳಲಾರದು. ಬದಲಾಗಿ ದೇವನ ಮತ್ತು ಧರ್ಮಾಧ ಹೆಸರಲ್ಲಿ ಜನರು ಪರಸ್ಪರ ವಿಭಿನ್ನ ಹಾಗೂ ತದ್ವಿರುದ್ಧವಾದ ಮಾರ್ಗಗಳನ್ನು ಅನುಸರಿಸಬಹುದು. ಮಾನವ ಸಮಾಜದಲ್ಲಿ ಒಡಕು ಮತ್ತು ಬಿಕ್ಕಟ್ಟು ನೆಲೆಸಬಹುದು. ನಮ್ಮ ಭವ್ಯ ಭಾರತ ದೇಶದಲ್ಲಿ ನಾವು ಇದನ್ನೇ ಇಂದು ಕಾಣುತ್ತಿದ್ದೇವೆ.

ದೇವನು ಮಾನವನ ಮಾರ್ಗದರ್ಶನ ಹಾಗೂ ಅವನ ಲೌಕಿಕ ಮತ್ತು ಪಾರಮಾರ್ಥಿಕ ವಿಜಯಕ್ಕೆ ವಿಭಿನ್ನ ಮತ್ತು ವಿರೋಧಾಭಾಸಕ್ಕೆ ಆಸ್ಪದವಿರುವ ಧರ್ಮಗಳನ್ನು ಸೃಷ್ಟಿಸಿದ್ದಾನೆಂಬುದು ಬುದ್ಧಿಗೆ ನಿಲುಕುವ ವಿಚಾರವಲ್ಲ. ಇದು ದೇವನ ಯುಕ್ತಿ, ನ್ಯಾಯ ಮತ್ತು ಕಾರುಣ್ಯಕ್ಕೆ ವಿರುದ್ಧವಾದ ಕಲ್ಪನೆಯಾಗಿದೆ. ಖಂಡಿತವಾಗಿ ಅವನು ಮಾನವನಿಗೆ ಏಕೈಕ ಸನ್ಮಾರ್ಗವನ್ನು ತೋರಿರಲು ಸಾಧ್ಯ. ಅವನು ಮಾನವನ ಇಹ-ಪರಗಳ ವಿಜಯಕ್ಕೆ ಅವತೀರ್ಣಗೊಳಿಸಿರುವ ಸದ್ಧರ್ಮ ಏಕ ಧರ್ಮವಾಗಿರಲು ಮಾತ್ರ ಸಾಧ್ಯವಿದೆ. ನಾವು ಲೋಕ-ಪರಲೋಕಗಳಲ್ಲಿ ನೈಜ ವಿಜಯವನ್ನು ಬಯಸುತ್ತೇವೆಂದಾದರೆ ಮತ್ತು ಈ ನಿಟ್ಟಿನಲ್ಲಿ ನಾವು ನಿಜವಾಗಿಯೂ ಏಕಾಗ್ರಚಿತ್ತ ಮತ್ತು ಗಂಭೀರರಾಗಿದ್ದರೆ ದೇವನ ಸಂಪ್ರೀತಿ ಯಾವುದರಲ್ಲಿದೆ ಮತ್ತು ದೇವನು ಕಳುಹಿಸಿರುವ ಸದ್ಧರ್ಮ ಯಾವುದು ಎಂಬುದನ್ನು ಕಂಡರಿಯಬೇಕಾಗಿದೆ. ಈ ಮಹತ್ತರ ಮತ್ತು ಮೂಲಭೂತ ಉದ್ದೇಶಕ್ಕಾಗಿ ತನ್ನ ಬುದ್ಧಿ ಮತ್ತು ಸಮಯವನ್ನು ವ್ಯಯಿಸಬೇಕಾಗಿದೆ.

ನಿರ್ದಿಷ್ಟ ಗ್ರಂಥ ದೈವಿಕ ಗ್ರಂಥವಾಗಿದೆ ಮತ್ತು ನಿರ್ದಿಷ್ಟ ಕಾನೂನು ದೈವಿಕ ಕಾನೂನು ಎಂದು ತಿಳಿಯಲು ನಮಗೆ ಹೇಗೆ ಸಾಧ್ಯ? ಅದನ್ನು ಈ ಕೆಳಗಿನ ಅಂಶಗಳ ಮೂಲಕ ಗುರುತಿಸಬಹುದಾಗಿದೆ.

- ಅದು ಸ್ಪಷ್ಟವಾದ ಶಬ್ದಗಳಲ್ಲಿ ತಾನು ದೈವಿಕ ಗ್ರಂಥವಾಗಿರುವ ಬಗ್ಗೆ ಹಾಗೂ ಅದರಲ್ಲಿರುವ ನಿಯಮಗಳು ದೈವಿಕ ನಿಯಮಗಳೆಂಬ ಬಗ್ಗೆ ಸ್ವತಃ ಸಾರಿ ಹೇಳಬೇಕು.
- ಅದರಲ್ಲಿ ಬುದ್ಧಿ ಮತ್ತು ವಿವೇಕಕ್ಕೆ ನಿಲುಕದ ಯಾವುದೇ ಅಂಶ ಇರಕೂಡದು.
- ಸಂಸ್ಕೃತಿ ಮತ್ತು ನಾಗರಿಕತೆಗೆ ಯೋಗ್ಯವಲ್ಲದ ಮತ್ತು ಅನೈತಿಕವಾದ ಯಾವುದೇ ಅಂಶ ಅದರಲ್ಲಿ ಇರಬಾರದು.
- ಅದು ವಂಶ, ವರ್ಣ, ದೇಶ, ಭಾಷೆ ಮತ್ತು ವೃತ್ತಿಯ ಆಧಾರದಲ್ಲಿ ಮಾನವರ ನಡುವೆ ಯಾವುದೇ ರೀತಿಯ ತಾರತಮ್ಯವನ್ನು ಕಲ್ಪಿಸಬಾರದು.
- ಅದು ಮಾನವರ ಸರ್ವತೋಮುಖ ಪ್ರಗತಿಯನ್ನು ಪ್ರತಿಪಾದಿಸಬೇಕು.
- ಅದು ಸಕಲ ಮಾನವರ ಸಕಲ ಸಮಸ್ಯೆಗಳಿಗೆ ಪರಿಹಾರವನ್ನು ಸೂಚಿಸಬೇಕು.
- ಅದರ ಆಧಾರದಲ್ಲಿ ವ್ಯಕ್ತಿ, ಸಮಾಜ ಮತ್ತು ರಾಷ್ಟ್ರದ ನಿರ್ಮಾಣವಾಗಿ ಅದು ನಿಜವಾಗಿಯೂ ಪ್ರಾಯೋಗಿಕ ವ್ಯವಸ್ಥೆಯಾಗಿದೆ ಎಂದು ಸಾಬೀತುಗೊಂಡಿರಬೇಕು. ಅದು ಮಾನವರ ಸಮಸ್ಯೆಗಳಿಗೆ ಪರಿಹಾರವನ್ನೂ ಅವರ ವಿಜಯ ಮತ್ತು ಯಶಸ್ಸನ್ನೂ ಖಾತ್ರಿ ಪಡಿಸಬೇಕು.
- ಅದು ನಿರ್ದಿಷ್ಟ ಕಾಲಕ್ಕೆ ಮಾತ್ರ ಅನ್ವಯಿಸದೆ, ಎಲ್ಲ ಕಾಲಗಳಲ್ಲೂ ಅನುಸರಣಾಯೋಗ್ಯ ಹಾಗೂ ಜೀವನದ ಸಮಸ್ಯೆಗಳ ಪರಿಹಾರವಾಗಿರಬೇಕು. ಅಂತೆಯೇ ಅದು ಪ್ರಸಕ್ತ ಕಾಲಕ್ಕೂ ಪ್ರಸ್ತುತವಾಗಿರಬೇಕು.

ಅಲ್ಲಾಹನ ಸಂಪ್ರೀತಿ ಆ ಗ್ರಂಥವನ್ನು ಅನುಸರಿಸುವುದರಲ್ಲಿ ಅಡಕವಾಗಿದೆ ಹಾಗೂ ಅದನ್ನು ಅನುಸರಿಸದಿದ್ದರೆ ಅಲ್ಲಾಹನ ಕ್ರೋಧಕ್ಕೆ ಗುರಿಯಾಗಬೇಕಾದೀತೆಂದು ಅದು ಸ್ಪಷ್ಟೋಕ್ತಿಯಲ್ಲಿ ಸಾರಿಹೇಳಬೇಕು.

ಅದು ಅತ್ಯಂತ ಸುರಕ್ಷಿತ ಮತ್ತು ಕ್ರೋಢೀಕೃತ ಸ್ಥಿತಿಯಲ್ಲಿ ಉಪಲಬ್ಧವಿರಬೇಕು.

ಯಾವ ಧರ್ಮ ಈ ಹತ್ತು ಮಾನದಂಡಗಳಿಗೆ ಸರಿಗಟ್ಟುತ್ತದೆ ಎಂದು ನೀವು ವಲೋಕಿಸಿನೋಡಿ.

ಜೈನಮತವು ನಿಸರ್ಗದ ಸೃಷ್ಟಿಕರ್ತನ ಅಸ್ತಿತ್ವವನ್ನೇ ನಿರಾಕರಿಸುತ್ತದೆ, ಆದ್ದರಿಂದ ದನ್ನು ಈ ಪಟ್ಟಿಯಿಂದ ಹೊರಗಿರಿಸಬೇಕಾಗುತ್ತದೆ.

ಗೌತಮಬುದ್ಧ ಸ್ಪಷ್ಟವಾಗಿ ದೇವಾಸ್ತಿತ್ವವನ್ನು ನಿರಾಕರಿಸುವುದಿಲ್ಲ. ಆದರೆ ಅವರು ವನಿಂದ ಹಾಗೂ ದೈವಿಕ ನಿಯಮಗಳಿಂದ ಮುಕ್ತನಾಗಿ ಜೀವನದ ದುಃಖಗಳನ್ನು ಹರಿಸಬಯಸುತ್ತಾರೆ. ಅಲ್ಲದೆ ಈ ಎರಡೂ ಧರ್ಮಗಳು ಲೋಕವಿರಕ್ತಿಯನ್ನು ತಿಪಾದಿಸುತ್ತದೆ. ಅದು ಜೀವನದ ಸಮಸ್ಯೆಗಳ ಪರಿಹಾರಕ್ಕೆ ಯಾವುದೇ ಜೀವನ ವಸ್ಥೆಯನ್ನು ಮುಂದಿಡುವುದಿಲ್ಲ.

ಹಿಂದೂ ಧರ್ಮದ ಮೂಲ ಕೃತಿಯಾದ ವೇದ ಸ್ವತಃ ದೈವಿಕ ಗ್ರಂಥವಾಗಿರುವ ಬಗ್ಗೆ ತಿಪಾದಿಸುವುದಿಲ್ಲ. ಅದರ ಮಂತ್ರಗಳ ಪ್ರತಿಯೊಂದು ಸಂಕಲನದೊಂದಿಗೆ ಅದನ್ನು ಸಿದ ಋಷಿಯ ಬಗ್ಗೆ ಉದ್ಧರಿಸಲಾಗಿರುತ್ತದೆ. ಕೆಲವು ಮಂತ್ರಗಳಲ್ಲೇ ಋಷಿಯ ಹೆಸರನ್ನು ಲ್ಲೇಖಿಸಲಾಗಿರುತ್ತದೆ. ಋಷಿ ಪುರುಷನಾಗಿದ್ದರೆ ಪುಲ್ಲಿಂಗ ಉದ್ಧರಣೆಗಳಿರುತ್ತದೆ ಹಾಗೂ ಷಿ ಸ್ತ್ರೀ ಯಾಗಿದ್ದರೆ ಸ್ತ್ರೀಲಿಂಗದ ಉದ್ಧರಣೆಗಳಿರುತ್ತದೆ. ಇದರಿಂದ ವೇದ ದೈವಿಕ ಯಲ್ಲ ಬದಲಾಗಿ ವಿಭಿನ್ನ ಋಷಿಗಳು ರೂಪಿಸಿದ ಕೃತಿಯಾಗಿದೆ ಎಂದು ವ್ಯಕ್ತವಾಗುತ್ತದೆ.

ಇಂದು ಪ್ರಚಲಿತವಿರುವ ಬೈಬಲ್‌ನ ಸ್ಥಿತಿಯೂ ಇದುವೇ ಆಗಿದೆ. ಹಳೆಯ ಂಬಡಿಕೆಯು ದೈವಿಕ ಕೃತಿಯೆಂದು ವಾದಿಸುವುದಿಲ್ಲ. ಅಂತೆಯೇ ಹೊಸ ಒಡಂಬಡಿಕೆ ತ ದೈವಿಕ ಕೃತಿ ಎಂದು ತನ್ನನ್ನು ಪರಿಚಯಿಸುವುದಿಲ್ಲ. ಈ ಎರಡರ ಉದ್ಧರಣೆ ಮತ್ತು ಯಗಳಿಂದ ಅದು ದೇವ ಕೃತಿಯಲ್ಲ ಮಾನವರ ಕೃತಿಯೆಂದು ವ್ಯಕ್ತವಾಗುತ್ತವೆ. ಬೈಬಲ್‌ನ ನ್ನ ಕಾಂಡ ಮತ್ತು ಸುವಾರ್ತೆಗಳನ್ನು ಯಾರು ಕ್ರೋಢೀಕರಿಸಿದ್ದಾರೆ ಎಂದೂ ನಮಗೆ ಇಲ್ಲ.

ವೇದಗಳಲ್ಲಿ ಜೀವನ ಸಂಹಿತೆಯನ್ನು ನಿರೂಪಿಸಲಾಗಿಲ್ಲ. ಜೀವನಸಂಹಿತೆ ಸ್ಮೃತಿಗಳಲ್ಲಿ ತ್ರವಿದೆ, ಆದರೆ ಅದನ್ನು ದೈವಿಕ ಸಂಹಿತೆಯೆಂದು ಪರಿಗಣಿಸಲಾಗುವುದಿಲ್ಲ. ಅಲ್ಲದೆ ತಿಗಳಲ್ಲಿ ಉದ್ಧರಿಸಲಾದ ಕಾನೂನುಗಳ ನಡುವೆ ಅತ್ಯಂತ ತೀವ್ರತರವಾದ ೋಧಾಭಾಸಗಳಿವೆ. ಅಲ್ಲದೆ ಸ್ಮೃತಿಗಳಲ್ಲಿ ಪ್ರಸ್ತಾವಿಸಲಾದ ಕಾನೂನುಗಳು ುಸಮ್ಮತವಾದುದಾಗಲಿ ಸಂತುಲಿತವಾದುದಾಗಲಿ ಅಲ್ಲ. ಅವು ಇಂದಿನ ಸಂಕೀರ್ಣ

ಸಮಸ್ಯೆಗಳಿಗೆ ಪರಿಹಾರವನ್ನೂ ಸೂಚಿಸುವುದಿಲ್ಲ. ಇಂದಿನ ಹಿಂದೂ ಸಮಾಜವೂ ಅದನ್ನು ಸ್ವೀಕರಿಸಲಾರದು. ಉಚ್ಚನೀಚತೆ ಮತ್ತು ಅಸ್ಪೃಶ್ಯತೆಯ ಮಾರಕ ಪಿಡುಗು ಸ್ಮೃತಿಯ ಕಾನೂನುಗಳ ಪರಿಣಾಮವೇ ಆಗಿದೆ.

ಹಳೆಒಡಂಬಡಿಕೆ ಅಥವಾ ತೌರಾತಿನ ಮೂಲಭೂತ ನಿಯಮಗಳು ಕುರ್‌ಆನಿನ ನಿಯಮಗಳಿಗೆ ಹೋಲುತ್ತವೆ. ಆದರೆ ಅದರ ವಿಸ್ತೃತ ನಿಯಮಗಳು ಅಪ್ರಸಕ್ತ ಮತ್ತು ಅಪ್ರಸ್ತುತವಾಗಿದೆ. ಇಂದಿನ ಸಂಕೀರ್ಣ ಸಮಸ್ಯೆಗಳ ಪರಿಹಾರಕ್ಕೆ ಸಂಬಂಧಿಸಿದಂತೆ ನಿಷ್ಪ್ರಯೋಜಕವಾಗಿವೆ. ಇನ್ನು ಹೊಸ ಒಡಂಬಡಿಕೆ ಕೇವಲ ನೈತಿಕ ಬೋಧನೆಗಳನ್ನಷ್ಟೇ ಹೊಂದಿವೆ. ಜೀವನ ಸಂಹಿತೆ ಮತ್ತು ಕಾನೂನುಗಳ ಪ್ರಸ್ತಾಪವೇ ಅದರಲ್ಲಿಲ್ಲ.

ದುರದೃಷ್ಟಾವಶಾತ್ ಇಂದು ಉಪಲಬ್ಧವಿರುವ ಧಾರ್ಮಿಕ ಗ್ರಂಥಗಳಲ್ಲಿ ಬುದ್ಧಿ ಮತ್ತು ವಿವೇಕಕ್ಕೆ ನಿಲುಕದ ಹಾಗೂ ನಾಗರಿಕತೆ ಮತ್ತು ಸಭ್ಯತೆಗೆ ತಕ್ಕುದಲ್ಲದ ಅನೇಕ ಅಂಶಗಳು ಕಂಡು ಬರುತ್ತವೆ. ಅದರಿಂದ ಮುಕ್ತವಾದ ಧಾರ್ಮಿಕ ಗ್ರಂಥವಿದ್ದರೆ ಅದು ಕುರ್‌ಆನ್ ಮಾತ್ರ ಕುರ್‌ಆನ್‌ಗೆ ಹೊರತಾದ ಅತ್ಯಂತ ಸುರಕ್ಷಿತ ಮತ್ತು ನಂಬಲರ್ಹವಾದ ಯಾವುದೇ ಧಾರ್ಮಿ ಗ್ರಂಥ ಇಂದು ಲಭ್ಯವಿಲ್ಲ. ವೇದಗಳಾಗಲಿ, ಬೈಬಲ್ ಆಗಲಿ, ಮಹಾವೀರ ಮತ್ತು ಗೌತಮ ಬುದ್ಧನ ಬೋಧನೆಗಳಾಗಲಿ ಈ ಮಾನದಂಡಕ್ಕೆ ಸರಿಗಟ್ಟುವುದಿಲ್ಲ. ವೇದ, ಬೈಬಲ್ ಮತ್ತು ಇತರ ಧಾರ್ಮಿಕ ಗ್ರಂಥಗಳ ಬೋಧನೆಗಳನ್ನು ಅನುಸರಿಸಿದುದರಿಂದಾಗಿ ಎಂತಹ ಸಮಾ ಅಸ್ತಿತ್ವಕ್ಕೆ ಬಂತು ಮತ್ತು ಯಾವ ರೀತಿಯ ಸಾಮ್ರಾಜ್ಯ ನಿರ್ಮಾಣವಾಯಿತು ಎಂದು ಚರಿತ್ರೆಯಿಂದ ನಮಗೆ ವ್ಯಕ್ತವಾಗುವುದಿಲ್ಲ. ಹೆಚ್ಚಿನೆಲ್ಲಾ ಧಾರ್ಮಿಕ ಗ್ರಂಥಗಳ ಇತಿಹಾ ಕೇವಲ ಪೌರಾಣಿಕ ಕಥೆಗಳಾಗಿವೆ. ಉನ್ನತ ಹಾಗೂ ಕೆಳಮಟ್ಟದ ಧಾರ್ಮಿಕ ನೇತಾರರು ಅವತಾರ ಪುರುಷರು, ದೇವತೆಗಳು ಮತ್ತು ಬೈಬಲ್‌ನಲ್ಲಿ ಪ್ರಸ್ತಾವಿಸಲಾದ ಪ್ರವಾದಿಗಳ ಮತ್ತು ನೇತಾರರ ಜೀವನದ ಬಗ್ಗೆ ಅತ್ಯಂತ ಹೇಯವಾದ ಅನೈತಿಕ ಅಪರಾಧಗಳನ ಆರೋಪಿಸಲಾಗಿದೆ. ಅದನ್ನು ಸಮ್ಮತಿಸಲಿಕ್ಕೂ ನಮ್ಮ ಸಾಮಾನ್ಯ ಬುದ್ಧಿಗೆ ಸಾಧ್ಯವಾಗುವುದಿಲ್ಲ

- ಮುಹಮ್ಮದ್(ಸ) ಅಲ್ಲಾಹನ ಪ್ರವಾದಿಯಾಗಿದ್ದಾರೆ. ಕುರ್‌ಆನ್ ಅಲ್ಲಾಹನ ಗ್ರಂಥವಾಗಿ ಮತ್ತು ಇಸ್ಲಾಮ್ ಅಲ್ಲಾಹನು ಅವತೀರ್ಣಗೊಳಿಸಿದ ಸದ್ಧರ್ಮವಾಗಿದೆ ಎಂ ಸ್ಪಷ್ಟವಾಗಿ ಸಾರಿಹೇಳುವ ಗ್ರಂಥ ಕುರ್‌ಆನ್ ಮಾತ್ರವೇ ಆಗಿದೆ. ಅದು ಆದಿಯಿಂ ಅಂತ್ಯದ ತನಕ ಒಮ್ಮೆಯಲ್ಲ, ನೂರಾರು ಸಲ ಈ ವಾಸ್ತವಿಕೆಯನ್ನು ಸ್ಪಷ್ಟೋಕ್ತಿಗಳ ಸಾರುತ್ತದೆ.
- ಕುರ್‌ಆನ್‌ನಲ್ಲಿ ಬುದ್ಧಿ ಮತ್ತು ವಿವೇಕಕ್ಕೆ ನಿಲುಕದ ಅಥವಾ ನಾಗರಿಕತೆ ಮತ್ತು ಸಭ್ಯತೆ ವಿರುದ್ಧವಾದ ಯಾವ ಪ್ರಸ್ತಾಪವೂ ಇಲ್ಲ.
- ಕುರ್‌ಆನ್ ವಂಶ, ವರ್ಣ, ದೇಶ, ಭಾಷೆ ಅಥವಾ ವೃತ್ತಿಯ ಆಧಾರದಲ್ಲಿ ಮಾನ

ನಡುವೆ ಯಾವ ತಾರತಮ್ಯವನ್ನೂ ಕಲ್ಪಿಸುವುದಿಲ್ಲ.

- ಇಸ್ಲಾಮೀ ಜೀವನ ವ್ಯವಸ್ಥೆ- ಮಾನವರ ಸರ್ವತೋಮುಖ ಬೆಳವಣಿಗೆಯ ಭರವಸೆ ನೀಡುತ್ತದೆ. ಮಾನವ ಜೀವನದ ಸಕಲ ವಿಧ ಸಮಸ್ಯೆಗಳಿಗೆ ಪರಿಹಾರ ಸೂಚಿಸುತ್ತದೆ.
- ಇಸ್ಲಾಮೀ ಬೋಧನೆಗಳನ್ನು ಅನುಸರಿಸಿದುದರಿಂದಾಗಿ ಲಕ್ಷಗಟ್ಟಲೆ ಜನರು ಮಾದರಿ ಮಾನವರಾಗಿ ಮಾರ್ಪಟ್ಟರು. ಅವರಿಂದ ರೂಪಿತವಾದ ಸಮಾಜ ಅತ್ಯಂತ ಆದರ್ಶಪ್ರಾಯವಾದ ಸಮಾಜವಾಗಿತ್ತು. ಅವರಿಂದಾಗಿ ನಿರ್ಮಾಣಗೊಂಡ ಸಾಮ್ರಾಜ್ಯ ಮಾನವ ಚರಿತ್ರೆಯ ಅತ್ಯುತ್ತಮ ಮತ್ತು ಮಾದರಿ ಸಮಾಜವಾಗಿತ್ತು. ಅದರಿಂದಾಗಿ ಮಾನವರ ಸರ್ವತೋಮುಖ ಬೆಳವಣಿಗೆಯಾಯಿತು. ಮಾನವರ ಸಕಲ ಸಮಸ್ಯೆಗಳು ಪರಿಹರಿಸಲ್ಪಟ್ಟವು. ಈ ಎಲ್ಲಾ ಅಂಶಗಳು ಇತಿಹಾಸದ ವಿಶ್ವಸ್ಥ ದಾಖಲೆಗಳ ಮೂಲಕ ವಿದಿತವಾಗುತ್ತವೆ.
- ಇಂದಿಗೂ ಇಸ್ಲಾಮೀ ವ್ಯವಸ್ಥೆ ಪ್ರಾಯೋಗಿಕ ಮತ್ತು ಸಕಲ ಮಾನವರ ಸರ್ವವಿಧ ಸಮಸ್ಯೆಗಳಿಗೆ ಪರಿಹಾರವಾಗಿದೆ.
- ಇಸ್ಲಾಮ್ ಮಾತ್ರವೇ ಸದ್ಧರ್ಮವಾಗಿದೆ. ಅಲ್ಲಾಹನ ಸಂಪ್ರೀತಿ ಅದನ್ನು ಸ್ವೀಕರಿಸಿ ಅನುಸರಿಸುವುದರಲ್ಲಿದೆ. ಅದನ್ನು ಧಿಕ್ಕರಿಸುವುದರ ಪರಿಣಾಮ ಅಲ್ಲಾಹನ ಘೋರ ಅಸಮಾಧಾನ ಮತ್ತು ಯಾತನೆಯ ರೂಪದಲ್ಲಿ ಪ್ರಕಟವಾಗುತ್ತದೆ ಇತ್ಯಾದಿ ಅಂಶಗಳನ್ನು ಕುರ್‌ಆನ್ ಅನೇಕ ಬಾರಿ ಸ್ಪಷ್ಟೋಕ್ತಿಗಳಲ್ಲಿ ಸಾರಿ ಹೇಳುತ್ತದೆ.
- ಕುರ್‌ಆನ್ ಇಂದು ಅದರ ಒಂದು ಪದವೂ ವ್ಯತ್ಯಸ್ಥವಾಗದ ರೀತಿಯಲ್ಲಿ ಅತ್ಯಂತ ಸುರಕ್ಷಿತ ಸ್ಥಿತಿಯಲ್ಲಿ ಉಪಲಬ್ಧವಿದೆ. ಅದರ ವ್ಯಾಖ್ಯಾನವೂ ಪ್ರವಾದಿಚರ್ಯೆಯ ರೂಪದಲ್ಲಿ ಉಪಲಬ್ಧವಿದೆ. ಕುರ್‌ಆನನ್ನು ತಂದ ಪ್ರವಾದಿಯ ಜೀವನವೂ ಇಂದು ಸಕಲ ವಿವರಣೆಯೊಂದಿಗೆ ಲಭ್ಯವಿದೆ. ಅವರ ಬೋಧನೆಗಳನ್ನು ಸ್ವೀಕರಿಸುವುದರಿಂದಾಗಿ ಎಂತಹ ಮಾನವರು ಅಸ್ತಿತ್ವಕ್ಕೆ ಬಂದರು, ಯಾವ ರೀತಿಯ ಸಮಾಜ ಅಸ್ತಿತ್ವಕ್ಕೆ ಬಂತು, ಯಾವ ವಿಧದ ಸಾಮ್ರಾಜ್ಯ ನಿರ್ಮಾಣವಾಯಿತು- ಈ ಎಲ್ಲಾ ವಿಷಯಗಳು ಪೌರಾಣಿಕ ಕಥೆಗಳ ರೂಪದಲ್ಲಲ್ಲ- ಸುರಕ್ಷಿತ ಇತಿಹಾಸದ ರೂಪದಲ್ಲಿ ಉಪಲಬ್ಧವಿದೆ.

## 10. ಪರಲೋಕದ ಶಾಶ್ವತ ವಿಜಯ

ಇದು ಕೊನೆಯ ಹಾಗೂ ಅತಿ ಪ್ರಮುಖವಾಗಿರುವ ವಿಚಾರವಾಗಿದೆ. ನಾವೆಲ್ಲರೂ ಒಂದು ದಿನ ಮರಣ ಹೊಂದುತ್ತೇವೆ. ಅನಂತರ ದೇವನ ಮುಂದೆ ಖಂಡಿತ ಹಾಜರಾಗಬೇಕಾಗಿದೆ. ಲೆಕ್ಕ ಸಮರ್ಪಣೆ ಮತ್ತು ಶಿಕ್ಷೆ-ರಕ್ಷೆಗಳನ್ನು ಎದುರಿಸಬೇಕಾಗಿದೆ. ಅಲ್ಲಿ

ಸ್ವರ್ಗ-ನರಕಗಳಿವೆ. ಅಲ್ಲಿನ ಶಾಶ್ವತ ಜೀವನದಲ್ಲಿ ನಿಸ್ಸೀಮವಾದ, ಅಂತ್ಯಕಾಣದ ಮತ್ತು ಊಹೆಗೂ ನಿಲುಕದ ಅನುಗ್ರಹಗಳಿವೆ. ಅಂತೆಯೇ ಅಲ್ಲಿ ಅತ್ಯಂತ ಭಯಾನಕ, ಯಾತನಾಮಯ ಮತ್ತು ನಿಂದನೀಯ ಶಿಕ್ಷೆ ಇದೆ. ಇವೆಲ್ಲವನ್ನೂ ಅಲ್ಲಿ ಖಂಡಿತ ಎದುರಿಸಬೇಕಾಗಿದೆ. ಹಾಗಿರುವಾಗ ಪ್ರತಿಯೋರ್ವ ವ್ಯಕ್ತಿ, ಪ್ರತಿಯೊಂದು ಸಮಾಜ ಮತ್ತು ಸಮಸ್ತ ಮಾನವಕುಲದ ಮೂಲಭೂತ ಸಮಸ್ಯೆಯೇನೆಂದರೆ ಅವರಿಗೆ ಪರಲೋಕದ ಶಾಶ್ವತ ವಿಜಯ ದೊರೆಯಬೇಕು. ಶಾಶ್ವತ ಹಾಗೂ ಯಾತನಾಮಯವಾದ ಶಿಕ್ಷೆಯಿಂದ ಅವರು ರಕ್ಷಿಸಲ್ಪಡಬೇಕು. ಆದ್ದರಿಂದ ಮಾನವ ಕುಲಕ್ಕೆ ಪರಲೋಕದ ಶಾಶ್ವತ ವಿಜಯವನ್ನು ದೊರಕಿಸುವ ಮತ್ತು ಪರಲೋಕ ಶಿಕ್ಷೆಯಿಂದ ಅವರನ್ನು ರಕ್ಷಿಸುವ ವ್ಯವಸ್ಥೆ ಮಾತ್ರ ಅನುಗ್ರಹಪ್ರದ ವ್ಯವಸ್ಥೆಯೆನಿಸಿಕೊಳ್ಳುವುದು.

ಈ ಲೋಕದ ತಾತ್ಕಾಲಿಕ ಯಶಸ್ಸು ಮತ್ತು ಪರಲೋಕದ ಶಾಶ್ವತ ವಿಜಯಗಳೆರಡೂ ಅಮರನಾದ ದೇವನ ಕೈಯಲ್ಲಿದೆ. ದೇವನ ಸಂಪ್ರೀತಿಯ ಗಳಿಕೆ ಮತ್ತು ಅವನು ಅವತೀರ್ಣಗೊಳಿಸಿದ ಸದ್ಧರ್ಮವಾದ ಇಸ್ಲಾಮಿನ ಪಾಲನೆಯಿಂದ ಮಾತ್ರವೇ ನಾವು ಲೌಕಿಕ ಯಶಸ್ಸು ಮತ್ತು ಪಾರಮಾರ್ಥಿಕ ವಿಜಯವನ್ನು ಸಂಪಾದಿಸಬಹುದಾಗಿದೆ.

ಇದುವೇ ಇಸ್ಲಾಮ್. ಅಲ್ಲಾಹನ ಅತಿ ದೊಡ್ಡ ಅನುಗ್ರಹ. ಮಾನವಕುಲದ ಪಾಲಿಗೆ ಅತ್ಯಂತ ಸಮೃದ್ಧ ಮತ್ತು ಅನುಗ್ರಹದಾಯಕ ವ್ಯವಸ್ಥೆ.

ಒಬ್ಬನು ದೇವನ ದಾಸ್ಯ ಮತ್ತು ಆರಾಧನೆ ಕೈಗೊಳ್ಳಬೇಕೆಂಬುದು ಇಸ್ಲಾಮಿನ ಸಂದೇಶವಾಗಿದೆ. ಅವನ ಹೊರತು ಬೇರಾರೂ ಆರಾಧನೆ ಮತ್ತು ದಾಸ್ಯಕ್ಕೆ ಅರ್ಹರಲ್ಲ. ಅವನು ಕಳುಹಿಸಿರುವ ಸಕಲ ಪ್ರವಾದಿ ಮತ್ತು ಸಂದೇಶವಾಹಕರ ಮೇಲೆ ವಿಶ್ವಾಸವಿರಿಸಬೇಕಾಗಿದೆ. ಪ್ರವಾದಿಗಳ ಸರಮಾಲೆಯಲ್ಲಿ ಮುಹಮ್ಮದ್‌ರು(ಸ) ಅತ್ಯಂತ ಕೊನೆಯವರಾಗಿದ್ದಾರೆ ಎಂದು ಅಂಗೀಕರಿಸಬೇಕಾಗಿದೆ. ಅಲ್ಲಾಹನ ಸಕಲ ಗ್ರಂಥಗಳ ಮೇಲೆ ಹಾಗೂ ಅಂತಿಮ ದೈವಿಕ ಗ್ರಂಥವಾದ ಪವಿತ್ರ ಕುರ್‌ಆನ್‌ನ ಮೇಲೆ ವಿಶ್ವಾಸವಿರಿಸಬೇಕಾಗಿದೆ. ಎಲ್ಲ ಕಾಲಗಳಲ್ಲಿ ಮಾನವರ ವಿಜಯಕ್ಕಾಗಿ ಆಗಮಿಸಿದ ಅಲ್ಲಾಹನ ಧರ್ಮವಾದ ಇಸ್ಲಾಮಿನ ಮೇಲೆ ನಂಬಿಕೆಯಿಡಬೇಕಾಗಿದೆ. ಪ್ರವಾದಿ ಮುಹಮ್ಮದ್‌ರೊಂದಿಗೆ(ಸ) ಅದನ್ನು ಪೂರ್ತೀಕರಿಸಲಾಯಿತು. ಈ ಧರ್ಮವನ್ನು ಅಂಗೀಕರಿಸಿ ಜೀವನವನ್ನು ಅದರ ಬೋಧನೆಗಳಿಗೆ ಬದ್ಧಗೊಳಿಸಬೇಕಾಗಿದೆ. ಲೋಕದ ತುಚ್ಛ ಮತ್ತು ತಾತ್ಕಾಲಿಕ ಹಿತಾಸಕ್ತಿಗಳ ಬದಲು ಪರಲೋಕದ ಶಾಶ್ವತ ವಿಜಯವನ್ನು ತನ್ನೆಲ್ಲಾ ಪ್ರಯತ್ನಗಳ ಗುರಿಯನ್ನಾಗಿ ಮಾಡಬೇಕಾಗಿದೆ.

ಇಸ್ಲಾಮ್ ನಿರ್ದಿಷ್ಟ ವಂಶ, ವರ್ಗ ಅಥವಾ ಸಮುದಾಯದ ಸೊತ್ತಲ್ಲ. ಸಕಲ ಮಾನವರಿಗೆ ಅನ್ವಯವಾಗುವಂತಹುದಾಗಿದೆ. ಮಾನವರ ಪ್ರಭು, ಪರಿಪಾಲಕ ಮತ್ತು ಆಜ್ಞಾಧಿಕಾರಿಯ ವತಿಯಿಂದ ಅವತೀರ್ಣಗೊಳಿಸಲ್ಪಟ್ಟ ಧರ್ಮ ಅದಾಗಿದೆ. ಯಾರು ಅದನ್ನು ಅಂಗೀಕರಿಸುತ್ತಾರೋ ಅದು ಅವರದಾಗಿ ಬಿಡುತ್ತದೆ. ಅದನ್ನು ಸ್ವೀಕರಿಸುವವರು ಇಹ-ಪರಗಳ

ವಿಜಯವನ್ನು ತಮ್ಮದಾಗಿಸಿ ಕೊಳ್ಳುತ್ತಾರೆ, ಅದನ್ನು ಧಿಕ್ಕರಿಸುವವರು ಉಭಯ ಲೋಕಗಳಲ್ಲಿ ನಿಂದ್ಯರೂ ಅಸಫಲರೂ ಆಗುತ್ತಾರಲ್ಲದೆ ದೇವನ ಘೋರ ಯಾತನೆಗೆ ಗುರಿಯಾಗುತ್ತಾರೆ.

ಈ ಅನುಗ್ರಹದಾಯಕ ವ್ಯವಸ್ಥೆಯನ್ನು ಪ್ರಾಮಾಣಿಕತೆ ಮತ್ತು ಏಕಾಗ್ರತೆಯೊಂದಿಗೆ ಅಂಗೀಕರಿಸಲು ನಾವು ಮುಸ್ಲಿಮರಿಗೆ ಕರೆಕೊಡುತ್ತೇವೆ. ಆ ಮೂಲಕ ಅವರು ತಮ್ಮ ಪಾಲಿಗೆ ಮಾತ್ರವಲ್ಲ ತಮ್ಮ ಸಮಾಜ, ಸಮುದಾಯ, ರಾಷ್ಟ್ರ ಮತ್ತು ಸಕಲ ಮಾನವಕುಲದ ಪಾಲಿಗೆ ಅನುಗ್ರಹದ ಸಾಕಾರ ಮೂರ್ತಿಗಳಾಗಿ ಪರಿಣಮಿಸಬಹುದು. ದೇಶಬಾಂಧವರು ಅದರಿಂದ ಪುನೀತರಾಗುವ ರೀತಿಯಲ್ಲಿ ಈ ಅನುಗ್ರಹ ವ್ಯವಸ್ಥೆಯನ್ನು ಅವರ ನಡುವೆ ವ್ಯಾಪಕವಾಗಿ ಪ್ರಚುರ ಪಡಿಸಬೇಕೆಂದೂ ನಾವು ಮುಸ್ಲಿಮರಿಗೆ ಮನವಿ ಮಾಡುತ್ತೇವೆ. ಆ ಮೂಲಕ ನಮ್ಮ ದೇಶವು ತನ್ನ ಸಮಸ್ಯೆ ಮತ್ತು ಸಂಕಷ್ಟಗಳಿಂದ ಮುಕ್ತವಾಗಲು ಸಾಧ್ಯವಿದೆ. ಈ ಕೆಲಸ ಮಾಡುವವರು ದೇಶದ ಮಹೋಪಕಾರಿಗಳೂ ವಿಮೋಚಕರೂ ಆಗಿರುವರು. ಅವರು ಅಲ್ಲಾಹನ ಸಂಪ್ರೀತಿ ಮತ್ತು ಪರಲೋಕದ ಶಾಶ್ವತ ವಿಜಯಕ್ಕೂ ಪಾತ್ರರಾಗುವರು.

ಈ ಅನುಗ್ರಹದಾಯಕ ವ್ಯವಸ್ಥೆ ಮುಸ್ಲಿಮರ ಸೊತ್ತಲ್ಲ ಎಂದೂ ನಾವು ದೇಶಬಾಂಧವರಿಗೆ ಸ್ಪಷ್ಟಪಡಿಸಬಯಸುತ್ತೇವೆ. ಇದು ಅವರಷ್ಟೇ ನಿಮಗೂ ಅನ್ವಯವಾಗುತ್ತದೆ. ಇದು ಎಲ್ಲರ ಒಡೆಯನಿಂದ ಎಲ್ಲ ಮಾನವರಿಗಾಗಿ ಬಂದುದಾಗಿದೆ. ನೀವು ಇದರ ಕುರಿತು ಗಂಭೀರ, ವ್ಯಾಪಕ ಮತ್ತು ಆಳವಾದ ಅಧ್ಯಯನ ನಡೆಸಬೇಕಾಗಿದೆ. ಅಂತೆಯೇ ನಿಮಗೆ ಸನ್ಮಾರ್ಗ ತೋರಲು ಹಾಗೂ ನೇರಮಾರ್ಗದಲ್ಲಿ ನಡೆಸಲು ದೇವನಲ್ಲಿ ನಮ್ರತೆಯೊಂದಿಗೆ ಪ್ರಾರ್ಥಿಸಬೇಕಾಗಿದೆ. ಇದು ಅನ್ಯರದ್ದಲ್ಲ, ನಿಮ್ಮ ಸಮಸ್ಯೆಯಾಗಿದೆ. ನಿಮ್ಮ ತಾತ್ಕಾಲಿಕ ಮತ್ತು ಶಾಶ್ವತವಾದ ಯಶಸ್ಸು ಮತ್ತು ವಿಜಯದ ಸಮಸ್ಯೆಯಾಗಿದೆ. ಈ ಅನುಗ್ರಹಪ್ರದ ವ್ಯವಸ್ಥೆಯನ್ನು ಅಂಗೀಕರಿಸಿದರೆ ಇಹಲೋಕದಲ್ಲೂ ಪರಲೋಕದಲ್ಲೂ ವಿಜಯಿಗಳಾಗುವಿರಿ. ಅದನ್ನು ಜನರಿಗೆ ತಲಪಿಸಿದರೆ ಜನರ ವಿಮೋಚಕ ಮತ್ತು ಉಪಕಾರಿಗಳಾಗಿ ಮಾರ್ಪಡುವಿರಿ. ಅದನ್ನು ಜಾರಿಗೊಳಿಸಿದರೆ ಮತ್ತು ಸ್ಥಾಪಿಸಿದರೆ ದೇವೇಚ್ಛೆಯನ್ನು ಈಡೇರಿಸಿದ ಕೀರ್ತಿಗೆ ಪಾತ್ರರಾಗುವಿರಿ, ಆ ಮೂಲಕ ನೀವು ರಾಷ್ಟ್ರವನ್ನು ಸಂಕಷ್ಟಗಳಿಂದ ಪಾರುಗೊಳಿಸಿ ಸಕಲ ಮಾನವರ ಸರ್ವವಿಧ ಸಮಸ್ಯೆಗಳಿಗೆ ಪರಿಹಾರವನ್ನು ಹುಡುಕಿದಂತಾಗುವುದು. ಮಾನವಕುಲದ ಪಾಲಿಗೆ ಮಾದರಿ ಸಮಾಜ ಮತ್ತು ಮಾದರಿ ರಾಷ್ಟ್ರವೊಂದನ್ನು ಸ್ಥಾಪಿಸಿದಂತಾಗುವುದು. ಅದನ್ನು ನೀವು ಅಂಗೀಕರಿಸದಿದ್ದರೆ ನಿಮ್ಮ ಪಾಲಿಗೆ ಮಾತ್ರವಲ್ಲ ಸಮಾಜದ, ರಾಷ್ಟ್ರದ ಮತ್ತು ಸಕಲ ಮಾನವಕುಲದ ಪಾಲಿಗೆ ಘೋರ ನಷ್ಟ ಉಂಟು ಮಾಡಿದಂತಾಗುವುದು.

ಜಮಾಅತೆ ಇಸ್ಲಾಮಿ ಹಿಂದ್ ಈ ವ್ಯವಸ್ಥೆಯನ್ನು ಪರಿಚಯಿಸಲು, ಅದರ ಬೋಧನೆಗಳ ಆಧಾರದಲ್ಲಿ ಮುಸ್ಲಿಮರ ಜೀವನವನ್ನು ಸುಧಾರಿಸಲು, ಅದನ್ನು ಸ್ವತಃ ಪಾಲಿಸಿ ಇತರರನ್ನೂ ಪಾಲಿಸುವಂತೆ ಮಾಡುವ ಕಾರ್ಯಕರ್ತರನ್ನು ರೂಪಿಸಲು ಮತ್ತು ದೇಶಬಾಂಧವರಿಗೆ

ಆ ಬಗ್ಗೆ ಕರೆಕೊಡಲು ಪ್ರಯತ್ನಿಸುತ್ತಿದೆ. ಈ ಮಹತ್ಕಾರ್ಯದಲ್ಲಿ ಅದು ಮುಸ್ಲಿಮರಿಂದಲೂ ಅಂತೆಯೇ ಮುಸ್ಲಿಮೇತರರಿಂದಲೂ ಸಹಕಾರವನ್ನು ಅಪೇಕ್ಷಿಸುತ್ತದೆ.

ಜಮಾಅತೆ ಇಸ್ಲಾಮಿ ಹಿಂದ್ ಅದರೊಂದಿಗೆ ಸಮಾಜದ ಸುಧಾರಣೆ, ಒಳಿತಿನ ಸಂಸ್ಥಾಪನೆ ಮತ್ತು ಕೆಡುಕಿನ ನಿರ್ಮೂಲನಕ್ಕಾಗಿಯೂ ಪ್ರಯತ್ನಿಸುತ್ತಿದೆ. ಈ ಕಾರ್ಯದಲ್ಲಿಯೂ ಅದು ಮುಸ್ಲಿಮ್-ಮುಸ್ಲಿಮೇತರರಿಂದ ಸಹಾಯವನ್ನು ಅಪೇಕ್ಷಿಸುತ್ತದೆ.

ಅದಲ್ಲದೇ ಜಮಾಅತೆ ಇಸ್ಲಾಮಿ ಹಿಂದ್ ಮಾನವರ ಸೇವೆಯನ್ನೂ ಮಾಡುತ್ತಿದೆ. ದುರ್ಬಲರು, ಅಂಗವಿಕಲರು, ಬಡವರು, ಶೋಷಿತರು, ಹಿಂದುಳಿದವರು ಮತ್ತು ಮರ್ದಿತರ ಸೇವೆಗಾಗಿ ಅದು ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ ಮತ್ತು ನಡೆಸುತ್ತಿದೆ. ಈ ಕಾರ್ಯದಲ್ಲೂ ಅದು ಮುಸ್ಲಿಮ್ ಮುಸ್ಲಿಮೇತರ ಬಾಂಧವರ ಸಹಾಯ ಸಹಕಾರವನ್ನು ನಿರೀಕ್ಷಿಸುತ್ತದೆ. ದೇಶದ ಸಹೃದಯಿಗಳೆಲ್ಲರೂ ಅದರ ಕರೆಗೆ ಓಗೊಡುವರೆಂಬ ವಿಶ್ವಾಸವನ್ನೂ ಹೊಂದಿದೆ.

